ಮೈಸೂರು ವಿಶ್ವವಿದ್ಯಾನಿಲಯ

ಪ್ರಚಾರೋಪನ್ಯಾಸಮಾಲೆ—೫

# ನಮ್ಮ ಹಳ್ಳಿಗಳು

## ಹಿಂದೆ ಹೇಗೆ ಮುಂದೇನು

ಜಿ. ಎಸ್. ಕೃಷ್ಣಮೂರ್ತಿ, ಎಂ.ಎ.

ಬೆಂಗಳೂರು ಪ್ರೆಸ್

ಮೈಸೂರು ರೋಡ್, ಬೆಂಗಳೂರು ಸಿಟಿ

೧೯೩೯

# ಮುನ್ನುಡಿ

ಮೈಸೂರು ವಿಶ್ವವಿದ್ಯಾನಿಲಯದ ಚಾನ್ಸಲರವರಾದ ಆಳುವ ಮಹಾಸ್ವಾಮಿಯವರು ಮೊದಲನೆಯ ಸೆನೆಟ್ ಸಭೆಯ ಪ್ರಾರಂಭೋತ್ಸವದ ಭಾಷಣದಲ್ಲಿಯೂ, ಪುನಃ ಮೊದಲನೆಯ ಕಾನ್ವೊಕೇಷನ್ ಮಹೋತ್ಸವದ ಭಾಷಣದಲ್ಲಿಯೂ ವಿಶ್ವವಿದ್ಯಾನಿಲಯದ ಪಾಲಿಗೆ ಹಲವು ಕರ್ತವ್ಯಗಳನ್ನು ಅಪ್ಪಣೆ ಮಾಡಿದರು. ಅವುಗಳಲ್ಲಿ ವಿಶೇಷವಾದವು ಇವೆರಡು: ಒಳ್ಳೆಯ ಕನ್ನಡದಲ್ಲಿ ಬರೆದ ಪುಸ್ತಕಗಳ ಪ್ರಕಟನೆ, ಹಾಗೂ ಕನ್ನಡ ಸಾಹಿತ್ಯಕ್ಕೆ ಪ್ರೋತ್ಸಾಹ. ಮತ್ತು ಶ್ರೀಮನ್ಮಹಾರಾಜರವರ ಪ್ರಜೆಗಳಲ್ಲಿ ಯಾರು ಕಾರಣಾಂತರಗಳಿಂದ ಕ್ರಮಬದ್ಧವಾದ ಶಿಕ್ಷಣ ಶಿಸ್ತುಗಳಲ್ಲಿ ಭಾಗವಹಿಸಿ ಪರೀಕ್ಷೆಗಳಿಗೆ ಕೂಡಲು ಶಕ್ತರಲ್ಲವೋ ಅಂಥವರಲ್ಲಿ ಜ್ಞಾನಪ್ರಸಾರ ಮಾಡುವುದು; ಅಲ್ಲದೆ ಮೈಸೂರು, ಬೆಂಗಳೂರು ಈ ಎರಡು ಹಿರಿಯ ಪಟ್ಟಣಗಳಲ್ಲಿ ದೊರಕುವ ವಿದ್ಯಾಭ್ಯಾಸಾನುಕೂಲ್ಯಗಳನ್ನು ಪಡೆದಿಲ್ಲದ ಸಂಸ್ಥಾನದ ದೂರಪ್ರದೇಶಗಳಲ್ಲಿ ವಾಸಿಸುವ ಜನರಲ್ಲಿ ಉಚ್ಚ ವರ್ಗದ ಸಂಸ್ಕೃತಿಯನ್ನು ಹರಡುವುದು.

ಈ ಇಪ್ಪತ್ತುಮೂರು ವರ್ಷಗಳಿಂದಲೂ ವಿಶ್ವವಿದ್ಯಾನಿಲಯವು ಈ ಎರಡು ಮುಖ್ಯ ಧ್ಯೇಯಗಳನ್ನು ತನ್ನ ಮುಂದೆ ತಪ್ಪದೆ ನಿಲ್ಲಿಸಿಕೊಂಡಿದೆ. ಅದರ ಕನ್ನಡ ಪ್ರಕಟನ ಶಾಖೆಯು ಕೆಲವು ಪ್ರಸಿದ್ಧ ಹಳಗನ್ನಡ ಕಾವ್ಯಗಳನ್ನು ಎಚ್ಚರಿಕೆಯಿಂದ ಪರಿಷ್ಕರಿಸಿ ಅಚ್ಚು ಹಾಕಿಸಿದೆ; ಅಲ್ಲದೆ, ಸಾಹಿತ್ಯ ವಿಜ್ಞಾನ ವಿಷಯಗಳನ್ನು ಕುರಿತ ಕೆಲವು ಲಘು ಪುಸ್ತಕಗಳನ್ನೂ ಹೊರತಂದಿದೆ. ಪ್ರಚಾರೋಪನ್ಯಾಸ ಸಮಿತಿಯವರು ಸಂಸ್ಥಾನದ ಎಲ್ಲ ಭಾಗಗಳ ಅನೇಕ ಕೇಂದ್ರಗಳಲ್ಲಿ ಹೆಚ್ಚಾಗಿ ಕನ್ನಡದಲ್ಲಿಯೇ ಉಪನ್ಯಾಸಗಳನ್ನು ಏರ್ಪಡಿಸುತ್ತಿದ್ದಾರೆ.

ಇತ್ತೀಚೆಗೆ ಒಂದು ಫಲದಾಯಕವಾದ ಕಾರ್ಯಕ್ರಮ ಬೆಳೆದುಬರುತ್ತಿದೆ. ವಿಷಯ ಒಂದೊಂದಕ್ಕೆ ಒಂದೊಂದರಂತೆ ಬಿಡಿ ಉಪನ್ಯಾಸವನ್ನು ಕೊಡಿಸುವುದರ ಜೊತೆಗೆ, ವಿಶ್ವವಿದ್ಯಾ

ನಿಲಯದ ಅಧ್ಯಾಪಕ ಸಂಘದ ಸಹಕಾರದಿಂದ ಸಂಸ್ಕೃತಿ ಸಪ್ತಾಹಗಳೆಂದು ಈಗಾಗಲೇ ಕರೆಯಲ್ಪಡುತ್ತಿರುವ ಉಪನ್ಯಾಸ ಮಾಲೆಗಳನ್ನು ಇಡಿಸಲಾಗುತ್ತಿದೆ. ಒಂದೇ ಊರಿನಲ್ಲಿ ಐದಾರು ದಿನ ಭಾಷಣ ಕಾವ್ಯವಾಚನ ಸಂಗೀತಾದಿಗಳು ಜರುಗುತ್ತವೆ; ಉಪನ್ಯಾಸಗಳು ಸಾಹಿತ್ಯ ವಿಜ್ಞಾನ ಸಮಾಜವೆಲ್ಲಕ್ಕೂ ಸಂಬಂಧಿಸಿರುತ್ತವೆ. ಈ ಸಪ್ತಾಹಗಳು ನೆರವೇರಿದ ದೊಡ್ಡಬಳ್ಳಾಪುರ, ದಾವಣಗೆರೆ, ಕೋಲಾರ ಮುಂತಾದ ಎಲ್ಲ ಕಡೆಗಳಿಂದಲೂ ಅವಕ್ಕೆ ಬಹಳ ಮನ್ನಣೆ ದೊರೆತಿದೆ.

ಈಗ ಅತಿ ಹೊಸದಾದ ಏರ್ಪಾಡಾವುದೆಂದರೆ ಒಂದೆರಡು ಊರುಗಳನ್ನು ಆರಿಸಿಕೊಂಡು, ಅಲ್ಲಿಗೆ ಒಂದು ವರ್ಷದಲ್ಲಿ ಹಲವು ಬಾರಿ ಹೋಗಿ, ಕೆಲವು ವಿಷಯಗಳಲ್ಲಿ ಒಂದೊಂದನ್ನೂ ಕುರಿತು ನಾಲ್ಕಾರು ಉಪನ್ಯಾಸಗಳನ್ನು ಹೇಳುವ ಯೋಜನೆ. ಅದರಿಂದ ಆ ಊರುಗಳ ಜನರಿಗೆ ಅನಲ್ಪಕಾಲ ಎಡೆಬಿಡದೆ ಜ್ಞಾನಬೋಧೆ ಸಿಕ್ಕುವುದು. ಪ್ರತ್ಯಕ್ಷ ಕೇಳಿ ಉಪಯೋಗ ಪಡೆದ ಸಭಿಕರ ಗುಂಪಿನಿಂದ ಆಚೆಗೂ ಕೂಡ ಈ ಭಾಷಣಮಾಲೆಗಳ ಪ್ರಯೋಜನ ಪರಡಲೆಂಬ ಉದ್ದೇಶದಿಂದ ಅವುಗಳನ್ನು ಈ ರೀತಿ ಚಿಕ್ಕ ಹೊತ್ತಗೆಗಳಾಗಿ ಪ್ರಕಟಿಸಿದೆ.

ನಮ್ಮ ಘನ ಪ್ರಭುಗಳವರು ನಮ್ಮ ವಿಶ್ವವಿದ್ಯಾನಿಲಯಕ್ಕೆ ಎರಡು ಪವಿತ್ರ ಕರ್ತವ್ಯಗಳನ್ನು ನೇಮಿಸಿರುವರಷ್ಟೆ: ಸುಲಭ ಸಮಂಜಸ ಕನ್ನಡದಲ್ಲಿ ರಚಿಸಿದ ಗ್ರಂಥಗಳ ಪ್ರಕಟನೆ; ಜನತೆಯಲ್ಲಿ ಉತ್ತಮ ಬಗೆಯ ಸಂಸ್ಕೃತಿಯ ಪ್ರಸಾರ. ಆ ಎರಡು ಕರ್ತವ್ಯಗಳನ್ನೂ ಈ ಮಾರ್ಗವಾಗಿ ಒಂದೇ ಸಾರಿ ಸಾಧಿಸಬಹುದೆಂಬುದೇ ಹೀಗೆ ಉಪನ್ಯಾಸಗಳನ್ನು ಕೊಟ್ಟು, ಲಘು ಪುಸ್ತಕಗಳನ್ನು ಸಿದ್ಧ ಮಾಡಿದವರ ನಿರೀಕ್ಷೆ ಮತ್ತು ಹಬ್ಬಯಕೆ.

ವಿಶ್ವವಿದ್ಯಾನಿಲಯ, ಮೈಸೂರು
೨೯—೫—೧೯೩೯

**ಎನ್. ಎಸ್. ಸುಬ್ಬರಾವ್**

# ವಿಷಯ ಸೂಚಿ

## ಗ್ರಂಥ ಋಣ


1. "Planned Economy for India", by Sir M. Visvesvaraya.
2. "Indian Economics", by Jathar and Berri. Vol. I.
3. "Better Villages", by Brayne.
4. "Socrates in an Indian Village", by Brayne.
5. "ನಮ್ಮ ಹಳ್ಳಿಗಳು", by A. Seshaiyengar.

# I. ಹಿಂದಿನ ಅಚ್ಚುಕಟ್ಟು

ವಿಶ್ವವಿದ್ಯಾನಿಲಯದ ಉಪಾಧ್ಯಾಯರು ಕೈಕೊಂಡಿರುವ ಉಪನ್ಯಾಸ ಮಾಲೆಯಲ್ಲಿ, ಕನ್ನಡ ಸಾಹಿತ್ಯದ ಚರಿತ್ರೆ, ಕುಮಾರವ್ಯಾಸನ ಭಾರತ, ಹಿಂದೂ ದರ್ಶನಗಳು, ಖಗೋಳ ಶಾಸ್ತ್ರ ಮುಂತಾದ ಉದಾತ್ತವಾದ ವಿಷಯಗಳ ಮಧ್ಯೆ, ನಮ್ಮ ಹಳ್ಳಿಗಳ ವಿಷಯವಾಗಿಯೂ, ಉಪನ್ಯಾಸವೇರ್ಪಡಿಸಿರುವುದು ಆಶ್ಚರ್ಯಕ್ಕೆ ಕಾರಣವಾಗಿರಬಹುದು. ಹಳ್ಳಿಗಳಲ್ಲೇ ಹುಟ್ಟಿ, ಬೆಳೆದು ಜೀವನ ನಡೆಸುತ್ತಿರುವ ಜನಗಳಿಗೆ ಪಟ್ಟಣದಲ್ಲಿರುವವರು ಬಂದು ತಿಳಿವಳಿಕೆ ಹೇಳುವುದರ ಆನುಗುಣ್ಯವಾದರೂ ಏನು, ಎಂಬ ಸಂಶಯ ತಲೆದೋರಬಹುದು. ಆದರೆ "On-lookers see most of the game", ಅಂದರೆ "ಆಟದ ಸೊಬಗು ಆಟವಾಡುವವರಿಗಿಂತ ನೋಡುವರಿಗೆ ಚೆನ್ನಾಗಿ ತಿಳಿಯುತ್ತದೆ" ಎಂಬಂತೆ ಹಳ್ಳಿಯ ಸೊಬಗು ಹಳ್ಳಿಯ ಜೀವನದ ಕುಂದು ಕೊರತೆಗಳು ಹೊರಗಿನಿಂದ ನೋಡುವವರಿಗೆ ಎದ್ದು ಕಾಣುತ್ತವೆ. ಅಲ್ಲದೆ ನನಗೆ ಕೆಲವು ವರ್ಷಗಳ ಹಿಂದೆ ವಿಶ್ವವಿದ್ಯಾನಿಲಯದಾಶ್ರಯದಲ್ಲಿ ಹಳ್ಳಿಗಳ ಆರ್ಥಿಕಸ್ಥಿತಿಯ ವಿವರಗಳನ್ನು ಪರಿಶೀಲಿಸುವ (Economic Survey) ಸುಯೋಗವು ದೊರೆತಿತ್ತು. ಮತ್ತು ಹೋದ ವರ್ಷ ಸರ್ಕಾರದವರ ಕೃಪೆಯಿಂದ ಬೆಂಗಳೂರು ಡಿಸ್ಟ್ರಿಕ್ಟಿನ ಗ್ರಾಮಾಂತರಗಳಲ್ಲಿ ಸಂಚಾರಮಾಡಿ ಉಪನ್ಯಾಸಗಳನ್ನು ಕೊಡುವ ಸುಸಂಧಿಯೂ ಒದಗಿತ್ತು.

ನಮ್ಮ ದೇಶ ಮುಖ್ಯವಾಗಿ ಹಳ್ಳಿಗಳ ದೇಶ. ಇದನ್ನು ನೇಗಿಲಯೋಗಿಗಳ ತೌರುಮನೆಯೆಂದು ಒಬ್ಬ ಕವಿ

ವರ್ಣಿಸಿದ್ದಾನೆ. ಏಕೆಂದರೆ, ಯಾವ ರೀತಿ ಯೋಗಿಯು ತನ್ನ ಯೋಗಾಭ್ಯಾಸವನ್ನು ಎಷ್ಟೇ ತೊಂದರೆ ಬಂದರೂ ಬಿಡದೆ ಸಾಧಿಸುವನೋ, ಅದೇ ರೀತಿಯಾಗಿ ನಮ್ಮ ರೈತನು ಎಷ್ಟೇ ಕಷ್ಟಗಳಾದರೂ ಹಿಂಜರಿಯದೆ ಬೇಸಾಯವನ್ನೇ ನಂಬಿ ತನ್ನ ಬಾಳಿನ ಸಾಧನೆ ಮಾಡುತ್ತಿದ್ದಾನೆ. ಈಚೆಗೆ ದೇಶದ ಎಲ್ಲಾ ಭಾಗಗಳಲ್ಲಿಯೂ, ನಾಗರಿಕರಿಂದಲೂ, ವಿದ್ಯಾವಂತರಿಂದಲೂ "Back to Villages" ಅಂದರೆ "ಹಳ್ಳಿಗಳಿಗೆ ಹಿಂತಿರುಗಿ" ಎಂಬ ಉಪದೇಶ ಕೇಳಿಬರುತ್ತಿದೆ. ನಮ್ಮ ದೇಶದಲ್ಲಿ ಶೇಕಡಾ 80ಕ್ಕಿಂತ ಜಾಸ್ತಿಯಾಗಿ ಈಗಲೂ ಜನಗಳು ಹಳ್ಳಿಗಳಲ್ಲೇ ವಾಸಿಸುತ್ತಿದ್ದಾರೆ. ಬೇಸಾಯವನ್ನೇ ನಂಬಿಕೊಂಡಿದ್ದಾರೆ. ನಮ್ಮ ಮೈಸೂರು ಸೀಮೆಯನ್ನೇ ತೆಗೆದುಕೊಂಡರೆ ಅಷ್ಟೇ ಭಾಗ ಜನ ಹಳ್ಳಿಗಳಲ್ಲೇ ವಾಸಿಸುತ್ತಿದ್ದಾರೆ. 1931ನೇ ಖಾನೇಷುಮಾರಿ (Census)ಯ ವರದಿ ಪ್ರಕಾರ ನಮ್ಮ ಮೈಸೂರಿನಲ್ಲಿ 16,483 ಹಳ್ಳಿಗಳಿವೆ. ಸರಾಸರಿ ಹಳ್ಳಿ ಒಂದಕ್ಕೆ 334ರಂತೆ ಜನಗಳಿದ್ದಾರೆ. ಆದ್ದರಿಂದ ನಮ್ಮ ದೇಶ ಅಭಿವೃದ್ಧಿ ಹೊಂದಬೇಕಾದರೆ ಹಳ್ಳಿಗಳ ಸ್ಥಿತಿ ಉತ್ತಮವಾಗಬೇಕು. ರೈತನೆಂದರೆ ದೇಶದ ಬೆನ್ನುಮೂಳೆಯಿದ್ದಹಾಗೆ. ನಮ್ಮ ವಿಶ್ವವಿದ್ಯಾನಿಲಯದ ಮುಖ್ಯಾಧಿಕಾರಿಗಳಾದ ಶ್ರೀಮಾನ್ ಎನ್. ಎಸ್. ಸುಬ್ಬರಾಯರು ಒಂದುಸಾರಿ ನಮ್ಮ ದೇಶದ ರೈತನೆಂದರೆ ಆದಿಶೇಷನ ಹಾಗೆಂದು ವರ್ಣಿಸಿದರು. ಆದಿಶೇಷನು ಹೇಗೆ ಭೂಭಾರವನ್ನು ಹೊತ್ತು ಕೇವಲ ಗಾಳಿಯಿಂದಲೇ ಜೀವಿಸುತ್ತಾನೋ, ಹಾಗೆಯೇ ನಮ್ಮ ರೈತನೂ ಕೂಡ ಸಮಾಜಕ್ಕಾಗಿ ನಿರಂತರ ದುಡಿದು ತಾನು ಮಾತ್ರ ಸ್ವಲ್ಪ ಸೊಪ್ಪು, ರಾಗಿಹಿಟ್ಟಿನಿಂದ ಜೀವನಮಾಡುತ್ತಿದ್ದಾನೆ.

ಆದ್ದರಿಂದ ಹಳ್ಳಿಗಳ ಪ್ರಾಮುಖ್ಯತೆಯನ್ನು ಹೆಚ್ಚು ಮಾತು ಗಳಿಂದ ವರ್ಣಿಸಬೇಕಾಗಿಲ್ಲ.

ನಮ್ಮ ದೇಶದ ನಾಗರಿಕತೆಯ ಕೇಂದ್ರಗಳೆಂದರೆ ಹಳ್ಳಿಗಳೇ ಸರಿ. ಒಟ್ಟಿನಲ್ಲಿ ಹಳ್ಳಿಗಳ ಮಹತ್ವವನ್ನು ವಿದ್ಯಾವಂತನಾದ, ದೇಶಾಭಿಮಾನಿಯಾದ ಪ್ರತಿಯೊಬ್ಬನೂ ಮನಗಂಡಿದ್ದಾನೆ. ನಮ್ಮ ಮೈಸೂರಿನ ಸುಪ್ರಸಿದ್ಧ ದಿವಾನರಲ್ಲೊಬ್ಬರಾದ ಸರ್ ಎಂ. ವಿಶ್ವೇಶ್ವರಯ್ಯನವರು ತಮ್ಮ "Planned Economy for India" ಎಂಬ ಪುಸ್ತಕ ದಲ್ಲಿ ದೇಶದ ಏಳಿಗೆಯಾಗಬೇಕಾದರೆ ಹಳ್ಳಿಗಳ ಉದ್ಧಾರ ವಾಗಬೇಕೆಂದು ತಿಳಿಸಿದ್ದಾರೆ. ನಮ್ಮ ಈಗಿನ ದಿವಾನರಾದ ಸರ್ ಮಿರ್ಜಾ ಇಸ್ಮೇಲರವರು ಗ್ರಾಮಗಳ ಉದ್ಧಾರ ಕ್ಕಾಗಿ ಅವಿಶ್ರಾಂತವಾಗಿ ದುಡಿಯುತ್ತಿದ್ದಾರೆ. ಪ್ರಪಂಚ ದಲ್ಲೆಲ್ಲಾ ಮಹಾತ್ಮರೆಂದು ಹೆಸರುಹೊಂದಿರುವ ಗಾಂಧೀಜಿ ಯವರು ಹಳ್ಳಿಗಳ ಮಹತ್ವವನ್ನು ಸಾರುವುದಕ್ಕಾಗಿ ಕಾಂಗ್ರೆಸ್ ಅಧಿವೇಶನಗಳು ಹಳ್ಳಿಗಳಲ್ಲೇ ನಡೆಯಬೇಕೆಂದು ಹರಿಪುರ, ತ್ರಿಪುರಿ ಮುಂತಾದ ಸ್ಥಳಗಳಲ್ಲಿ ಸಭೆಗಳನ್ನೇರ್ಪಡಿಸಿರುವುದು ಎಲ್ಲರಿಗೂ ತಿಳಿದಿದೆ. ಈ ಉದ್ದೇಶವನ್ನು ಇನ್ನೂ ವಿಶದವಾಗಿ ಬೋಧಿಸಲು ಅವರು "Village Industries Association" "ಹಳ್ಳಿಗಳ ಕೈಗಾರಿಕೆಗಳ ಅಭಿವೃದ್ಧಿ ಸಂಘ" ಎಂಬುದನ್ನು ಸ್ಥಾಪಿಸಿ ತಾವು ಪಟ್ಟಣಗಳನ್ನು ಬಿಟ್ಟು, 'ಷೇಗಾಂವ್' ಎಂಬ ಹಳ್ಳಿಯಲ್ಲಿ ಮಹರ್ಷಿಗಳಂತೆ ವಾಸಿಸುತ್ತಿದ್ದಾರೆ.

ಗ್ರಾಮಗಳ ಅಭಿವೃದ್ಧಿಯ ವಿಷಯವನ್ನು ನಾವು ಚೆನ್ನಾಗಿ ಅರಿತುಕೊಳ್ಳಬೇಕಾದರೆ ಮೊದಲು ಹಿಂದಿನ ಕಾಲದ ಹಳ್ಳಿಗಳ ಅಚ್ಚುಕಟ್ಟನ್ನು ತಿಳಿಯಬೇಕಾದ್ದು ಅವಶ್ಯಕ. ಏಕೆಂದರೆ,

"Past is the foundation of the present" ಅಂದರೆ "ಹಿಂದಿನ ಇತಿಹಾಸವು ಮುಂದಿನ ಏಳಿಗೆಗೆ ತಳಹದಿ" ಎಂಬಂತೆ ಹಳ್ಳಿಗಳ ಹಿಂದಿನ ಸ್ಥಿತಿ ನಮಗೆ ಮಾರ್ಗದರ್ಶಕವಾಗುತ್ತದೆ. ನಮ್ಮ ಹಿಂದಿನ ಹಳ್ಳಿಗಳನ್ನು ಸರ್ ಚಾರ್ಲ್ಸ್ ಮೆಟ್‌ಕಾಫ್ ಎಂಬ ವಿದ್ವಾಂಸರೊಬ್ಬರು ಪ್ರತಿ ಹಳ್ಳಿಯೂ ಸ್ವಸಂಪೂರ್ಣತೆ (Self-sufficiency) ಯನ್ನು ಪಡೆದಿದ್ದ ಒಂದು ಪ್ರಜಾಪ್ರಭುತ್ವವೆಂದು ಸ್ತುತಿಸಿದ್ದಾರೆ. ನಮ್ಮ ದೇಶದಲ್ಲಿ ಅನೇಕ ರಾಜರು ಆಳಿದರು, ಅಳಿದರು. ಚಕ್ರಾಧಿಪತ್ಯಗಳು ಏರಿದುವು, ಉರುಳಿದುವು. ಪರದೇಶದವರು ಧಾಳಿ ನಡಸಿ ದೋಚಿಕೊಂಡುಹೋದರು. ಆದರೂ ನಮ್ಮ ಹಳ್ಳಿಗಳು ಬೆಳೆಯುತ್ತಲೇ ಇದ್ದುವು. "ರಾಯರಿಗೆ ರಾಜ್ಯವಾದರೆ ರಾಗಿ ಬೀಸುವುದು ತಪ್ಪೀತೆ" ಎಂಬ ನಾಣ್ನುಡಿಯಂತೆ ಆಳರಸರಿಗೆ ತಾವು ಕೊಡುವ ಕಂದಾಯ ತೆರಿಗೆಗಳನ್ನು ತೆತ್ತರಾಯ್ತು; ತಮಗೂ, ಹೊರಗಿನ ಪ್ರಪಂಚಕ್ಕೂ ಯಾವ ಸಂಬಂಧವೂ ಇಲ್ಲವೆಂದು ಹಳ್ಳಿಯ ಜನಗಳು ಹಿಂದೆ ತಿಳಿದಿದ್ದರು. ಈ ಹಳ್ಳಿಗಳು ಗ್ರೀಕರ ಇತಿಹಾಸದಲ್ಲಿ ಕಂಡುಬರುವ "City states"—ನಗರ ಪ್ರಭುತ್ವಗಳಂತೆ ಇದ್ದುವು. ನಮ್ಮ ಹಳ್ಳಿಗಳ ಜೀವನಕ್ರಮದಲ್ಲಿ ಸಮರ್ಪಕವಾದೊಂದು ವ್ಯವಸ್ಥೆಯಿತ್ತು (Plan). ಹಳ್ಳಿಯವರು ಹೊರಗಿನವರ ಸಹಾಯವನ್ನು ಕೋರದೆ ತಮ್ಮ ಜೀವನಕ್ಕೆ ಬೇಕಾದ ಸಾಧನ ಸೌಕರ್ಯಗಳನ್ನೆಲ್ಲಾ ತಾವೇ ಕಲ್ಪಿಸಿಕೊಳ್ಳುತ್ತಿದ್ದರು. ಪ್ರತಿಯೊಬ್ಬ ರೈತನೂ ತನಗೆ ಬೇಕಾದ ಆಹಾರ ಪದಾರ್ಥಗಳೊಂದಿಗೆ, ಉಡಿಗೆಗೆ ಬೇಕಾದ ಹತ್ತಿ, ದೀಪಕ್ಕೆ ಬೇಕಾಗುವ ಎಣ್ಣೆಬೀಜಗಳು ಮತ್ತು ಹಲವು ಬಾಬುಗಳಿಗೆ

ಬೇಕಾದ ಪದಾರ್ಥಗಳೆಲ್ಲವನ್ನೂ ಸ್ವಪ್ರಯತ್ನದಿಂದಲೇ ಹೊಂದಿಸಿಕೊಳ್ಳುತ್ತಿದ್ದನು. ಇದನ್ನು ವಿದ್ವಾಂಸರು "Subsistence farming" ಎಂಬುದಾಗಿ ವರ್ಣಿಸುತ್ತಾರೆ.

ಇದರ ಜೊತೆಗೆ ನಮ್ಮ ಹಿಂದಿನ ರೈತರು ವ್ಯರ್ಥವಾಗಿ ಕಾಲಕಳೆಯದೆ ವಿರಾಮ ಕಾಲದಲ್ಲಿ, ಉಪಯೋಗವಾಗುವ ಅನೇಕ ಕೈಕಸಬುಗಳನ್ನು ಇಟ್ಟುಕೊಂಡು ಉದ್ಯೋಗ ಪರರಾಗಿದ್ದರು. ಅಲ್ಲದೆ ಪ್ರತಿಯೊಂದು ಹಳ್ಳಿಯಲ್ಲಿಯೂ, ಹಳ್ಳಿಗೆ ಅಂಗವಾಗಿ 'ಬಾರಾಬಲೂತಿ' ಎನ್ನುವ ಕೆಲಸ ಗಾರರಿದ್ದರು. ತಮ್ಮ ಕೆಲಸವನ್ನು ತಾವೇ ಮಾಡಿಕೊಳ್ಳುವುದು ದೊಡ್ಡ ಕರ್ತವ್ಯ; ಕಷ್ಟಪಟ್ಟು ದುಡಿಯುವುದು ಎಂದಿಗೂ ಅಪಮಾನವಲ್ಲ ಎಂಬುದನ್ನು ಚೆನ್ನಾಗಿ ಅರಿತಿದ್ದರು. "ತಾನು ಮಾಡುವುದು ಉತ್ತಮ, ಆಳು ಮಾಡುವುದು ಹಾಳು", "ಕೈಕೆಸರಾದರೆ ಬಾಯಿ ಮೊಸರು" ಎನ್ನುವ ನಾಣ್ಣುಡಿಗಳು ಸಾರುವ ಅರ್ಥ ಇದೇ ಅಲ್ಲವೆ? ಯಾವ ಕೆಲಸ ನಡೆಯ ಬೇಕಾದರೂ ಊರಿನ ಜನಗಳೆಲ್ಲಾ ಕಲೆತು ಒಮ್ಮನಸ್ಸಿನಿಂದ ಉತ್ಸಾಹಶಾಲಿಗಳಾಗಿ, ತಮ್ಮ ಕೆಲಸವೆಂಬ ಒಂದು ವಿಶೇಷ ಅಭಿಮಾನದಿಂದ ಕೆಲಸ ಮಾಡುತ್ತಿದ್ದರು. ನಮ್ಮ ಸೀಮೆಯಲ್ಲಿ ಈಗಲೂ ಕಂಗೊಳಿಸುತ್ತಿರುವ ಕೆರೆ, ಕುಂಟೆ, ಬಾವಿ, ತೋಪು, ದೇವಾಲಯಗಳು ಇದಕ್ಕೆ ನಿದರ್ಶನವಾಗಿವೆ. ಗ್ರಾಮಗಳನ್ನು ಚೊಕ್ಕಟವಾಗಿ ಇಟ್ಟುಕೊಳ್ಳಬೇಕು, ಅವು ಸೌಂದರ್ಯದ ಬೀಡಾಗಿರಬೇಕು ಎಂಬುದು ನಮ್ಮವರ ಧ್ಯೇಯವಾಗಿತ್ತು. ದೇವರು ನಿರ್ಮಲನು, ಶಾಂತನು, ಸುಂದರನು ಎಂದು ತಿಳಿದು, ಆ ದೇವರನ್ನು ಧ್ಯಾನಮಾಡಬೇಕಾದರೆ ನಿರ್ಮಲ ವಾದ, ಸುಂದರವಾದ, ಶಾಂತವಾದ ವಾತಾವರಣವಿರ

ಬೇಕೆಂದು ನದೀತೀರ, ರಮ್ಯವಾದ ವನಾಂತರ, ಚಿತ್ತಾಕರ್ಷಣವಾದ ಬೆಟ್ಟಗಳ ಮೇಲ್ಭಾಗದಲ್ಲಿ ದೇವಸ್ಥಾನಗಳನ್ನು ನಿರ್ಮಿಸಿರುವುದನ್ನು ಈಗಲೂ ನೋಡಬಹುದು. ಪ್ರಾಚೀನಕವಿಗಳು ನಮ್ಮ ದೇಶದ ಗ್ರಾಮಾಂತರಗಳ ವರ್ಣನೆಯನ್ನು ಸಾಕಾದಷ್ಟು ಮಾಡಿರುತ್ತಾರೆ. ಅವರು ವರ್ಣಿಸಿರುವ ಸಂಪಿಗೆ, ಮಲ್ಲಿಗೆ, ಜಾಜಿ ಮುಂತಾದ ಹೂಗಿಡಗಳು, ನಿಂಬೆ, ಮಾವು, ಹಲಸು ಮುಂತಾದ ಫಲವೃಕ್ಷಗಳು ಹಳ್ಳಿಗಳಲ್ಲಿ ತುಂಬಿದ್ದುವು. ಈಗ ಅವುಗಳಿಗೆ ಬದಲಾಗಿ ಕೇವಲ ಎಕ್ಕ, ದತ್ತೂರಿ ಗಿಡಗಳೇ ನಮ್ಮ ಕಣ್ಣಿಗೆ ಬೀಳುತ್ತಿವೆ. ಹಿಂದೆ ಹಳ್ಳಿಯ ಜನಗಳು ಸಂಪ್ರದಾಯಬದ್ಧರಾಗಿದ್ದರು. ಈಗಿನಂತೆ ಗ್ರಾಂಥಿಕವಾದ ವಿಧಿ ಕಾನೂನುಗಳಿಲ್ಲದಿದ್ದರೂ, ಹಳ್ಳಿಗಳಲ್ಲಿ ಒಂದು ಬಗೆಯ ನಿಯಮವಿತ್ತು. ಊರಿನ ವ್ಯಾಜ್ಯ ವ್ಯವಹಾರಗಳನ್ನು ಊರಿನ ಹಿರಿಯರು ಪಂಚಾಯಿತಿಯಿಂದ ತೀರ್ಮಾನಿಸುತ್ತಿದ್ದರು. ಈಗಿನಂತೆ ಕೋರ್ಟು ಗಳಿರಲಿಲ್ಲ. ಹೀಗೆ ಹಳ್ಳಿಯ ಜೀವನದಲ್ಲಿ ಒಂದು ಕ್ರಮ, ಶಿಸ್ತು ಮತ್ತು ಸಂತೋಷವಿದ್ದಿತು. ಇದರಿಂದ ಜನರೆಲ್ಲರೂ ಕುಬೇರರಾಗಿದ್ದರೆಂದು ತಿಳಿಯಬಾರದು. ಜನಗಳಲ್ಲಿ ಸಮಾಧಾನ ತೃಪ್ತಿಗಳಿದ್ದುದರಿಂದ ಈಗಿನಂತೆ ನಿರುತ್ಸಾಹಕ್ಕೆ ಎಡೆಯಿರಲಿಲ್ಲ. ಇದಕ್ಕೆ ನಿದರ್ಶನ ಬೇಕಾದರೆ ಹಳ್ಳಿಗಳ ಗಾನ, ಲಾವಣಿ, ಸುಗ್ಗಿ ಕುಣಿತ, ಬಯಲಾಟಗಳು ಮುಂತಾದುವುಗಳನ್ನು ಪರಿಶೀಲಿಸಬಹುದು. ಮುಖ್ಯವಾಗಿ ಇಲ್ಲದ, ಸಲ್ಲದ ಆಶಯಗಳ ಗೋಜಿಗೆ ಹೋಗದೆ ಜನಗಳು ತೃಪ್ತಿ ಹರ್ಷಗಳಿಂದಿದ್ದರು.

ನಮ್ಮ ಹಳ್ಳಿಗಳ ಈಗಿನ ಸ್ಥಿತಿಯಾದರೋ ತುಂಬಾ

ಚಿಂತಾಜನಕವಾಗಿದೆ. ಎಲ್ಲೆಲ್ಲಿಯೂ ಜನಗಳಲ್ಲಿ ಬಡತನ, ನಿರುತ್ಸಾಹ, ಅಸೂಯೆ, ನಿರುದ್ಯೋಗ— ಇವುಗಳೇ ಕಂಡು ಬರುತ್ತಿವೆ. ಎಲ್ಲೆಲ್ಲಿಯೂ ಸರಿಯಾದ ಆಹಾರವಿಲ್ಲದೆ, ಉಡಲು ಬಟ್ಟೆಯಿಲ್ಲದೆ ಕಷ್ಟಪಡುತ್ತಿರುವ ದರಿದ್ರ ನಾರಾಯಣರ ನೋಟವೇ. ಈ ಬಡತನದ ಫಲವಾಗಿ 'ಶತಮಾನಂ ಭವತಿ' ಎಂಬ ಆಶೀರ್ವಚನವನ್ನು ಸಾರ್ಥಕ ಮಾಡುತ್ತಿದ್ದ ನಮ್ಮ ದೇಶದಲ್ಲಿ ಆಯುಃಪರಿಮಿತಿಯು ಕಡಿಮೆಯಾಗಿಬಿಟ್ಟಿದೆ. ಇಂಡಿಯಾ ದೇಶದ ಜನರ ಸರಾಸರಿ ಆಯುಃಪರಿಮಿತಿಯು 22·6 ವರ್ಷಗಳೆಂದು ನಿಶ್ಚಯಿಸ ಲ್ಪಟ್ಟಿದೆ. ಇವರ ಜೊತೆಗೆ ನಮ್ಮ ಜನಗಳಲ್ಲಿ ತಮ್ಮ ಕಷ್ಟದ ಬಾಳು ಕರ್ಮಫಲ (ಹಣೆಯಬರಹ)ವೆಂಬ ಮೂಢನಂಬಿಕೆ ಯೊಂದು ಬೇರೂರಿದೆ. ಕರ್ಮದ ನಿಜವಾದ ಅರ್ಥ ಕೃಷಿ, ತಲೆಯಮೇಲೆ ಕೈಯಿಟ್ಟುಕೊಂಡು ಕುಳಿತುಕೊಳ್ಳುವುದಲ್ಲ. "ಉದ್ಯೋಗಿನಂ ಪುರುಷಸಿಂಹ ಮುಪಯಿತಿ ಲಕ್ಷ್ಮೀ" ಎಂಬ ಸುಭಾಷಿತವನ್ನು ಮರೆಯಬಾರದು. ಆದರೆ ನಮ್ಮ ಜನಗಳು ಈಗ ವಿಶೇಷ ಸೋಮಾರಿಗಳಾಗಿ ವ್ಯರ್ಥ ಕಾಲಕ್ಷೇಪ ಮಾಡುತ್ತಿದ್ದಾರೆ. ಒಗ್ಗಟ್ಟಿನಿಂದ ಕೆಲಸಮಾಡುತ್ತಿದ್ದ ಜನಗಳು ಈಗ ದ್ವೇಷಾಸೂಯೆಗಳಿಗೆ ಬಲಿಯಾಗಿ, ವ್ಯಾಜ್ಯ ವ್ಯವಹಾರಗಳಲ್ಲಿ ನಿರತರಾಗಿ ಕಷ್ಟಪಡುತ್ತಿದ್ದಾರೆ. ಹಿಂದೆ ಸಂಪ್ರದಾಯಬದ್ಧರಾಗಿದ್ದ ಜನಗಳಲ್ಲಿ ಕಾನೂನುಗಳು ಜಾಸ್ತಿಯಾದಂತೆಲ್ಲಾ ಸುಳ್ಳು, ಮೋಸಗಳು ಅಭಿವೃದ್ಧಿ ಹೊಂದಿ, ಹಿಂದಿನ ಶಿಸ್ತು ಮಾಯವಾಗಿ, ಅನಾಯಕತ್ವ ವೇರ್ಪಟ್ಟು ಈಗಿನ ಹಳ್ಳಿಗಳು ಕಟ್ಟುಹರಿದ ಪಂಜುಗಳಂತಾ ಗಿವೆ. ಊರಿನ ಏಳಿಗೆಯಲ್ಲಿಯೂ, ಸೊಬಗಿನಲ್ಲಿಯೂ ಅಭಿ

ಮಾನವಿಟ್ಟಿದ್ದ ಜನಗಳು ಈಗ ತಮ್ಮ ಹಳ್ಳಿಗಳ ವಿಷಯದಲ್ಲಿ ಕೇವಲ ಉಪೇಕ್ಷೆಯನ್ನು ತೋರಿಸಿ "ಕೆಟ್ಟು ಪಟ್ಟಣ ಸೇರು" ಎಂಬ ತತ್ವವನ್ನು ಅನುಸರಿಸಿ ನಗರಗಳಿಗೆ ವಲಸೆ ಹೋಗುತ್ತಿದ್ದಾರೆ (Migration). ಹಿಂದಿನ ಸ್ವಸಂಪೂರ್ಣತೆಯು ಅದೃಶ್ಯವಾಗಿ ಜನಗಳು ತಮಗೆ ಬೇಕಾದ ಪ್ರತಿಯೊಂದು ಪದಾರ್ಥಕ್ಕೂ, ಇತರರ ಕೈಕಾಯಬೇಕಾಗಿದೆ. ಹೊರಗಿನ ಪೈಪೋಟಿಯಿಂದ ನಮ್ಮ ಗ್ರಾಮಗಳ ಕೈಗಾರಿಕೆಗಳೆಲ್ಲ ಹಾಳಾಗಿ ಜನಗಳಿಗೆ ಕೆಲಸವಿಲ್ಲದಂತಾದ ಉದಾಹರಣೆಗಳು ಹೇರಳವಾಗಿವೆ. ಅಕ್ಕಿಮಿಲ್ಲುಗಳು ಬಂದು ಭತ್ತ ಕುಟ್ಟುವ ಏತ, ಒನಕೆಗಳು ಮಾಯವಾದುವು. ಬೀಸುವ ಯಂತ್ರಗಳಿಂದ ರಾಗಿಕಲ್ಲು ಹೋಯಿತು. ಎಣ್ಣೆ ಮಿಷನ್‌ಗಳಿಂದ ಗಾಣಗಳು ಹಿಂದೆ ಬಿದ್ದುವು. ಬಟ್ಟೆ ಗಿರಣಿಗಳಿಂದ ರಾಟೆಗಳೂ, ಕೈಮಗ್ಗಗಳೂ ನಾಶವಾದುವು. ಇತ್ತೀಚೆಗೆ ಗಾಡಿಗಳಿಗೆ ಉಪಯೋಗಿಸುತ್ತಿರುವ "Dunlop Tyres" ಎಂಬ ರಬ್ಬರ್ ಟೈರುಗಳಿಂದ ನಮ್ಮ ಬಡಗಿ ಮತ್ತು ಕಮ್ಮಾರರಿಗೂ ಬಲವಂತದ ರಜ ದೊರಕುವುದೋ ಏನೋ! ಒಟ್ಟಿನಲ್ಲಿ ನಮ್ಮ ಹಳ್ಳಿಯ ಜನಗಳ ಸ್ಥಿತಿ ಶೋಚನೀಯವಾಗಿ ಅನೇಕರು ಬಡತನದಲ್ಲಿ ನರಳಿ "ಕಡ ಹುಟ್ಟಿ ಬಡವ ಕೆಟ್ಟ" ಎಂಬಂತೆ ಸಾಲದಲ್ಲಿ ಹುಟ್ಟಿ ಬೆಳೆದು ಸಾಯುತ್ತಿದ್ದಾರೆ.

ಹಳ್ಳಿಗಳ ದುಃಸ್ಥಿತಿಗೆ ಅನೇಕ ಕಾರಣಗಳುಂಟು. ಬ್ರಿಟಿಷರ ಆಳ್ವಿಕೆಯ ಕಾಲದಿಂದ ನಮ್ಮ ಹಳ್ಳಿಗಳ ಇಳಿಮೆ ಪ್ರಾರಂಭವಾಯಿತೆಂದು ಹೇಳಬಹುದು. ಬ್ರಿಟಿಷರು ನಗರಗಳನ್ನು ಅಭಿವೃದ್ಧಿಪಡಿಸಿದಂತೆಲ್ಲಾ, ನಮ್ಮವರು ಪಟ್ಟಣಗಳ ಮೋಹಕ್ಕೆ ಬಿದ್ದು ಹಳ್ಳಿಗಳನ್ನು ತ್ಯಜಿಸಲಾರಂಭಿಸಿದರು.

ಅದರಲ್ಲೂ ಇಂಗ್ಲೀಷ್ ವಿದ್ಯಾಭ್ಯಾಸಮಾಡಿದ ಯುವಕರು ತಮ್ಮ ಹಿಂದಿನ ಸಂಸ್ಕೃತಿ, ಆಚಾರ, ಪದ್ಧತಿಗಳನ್ನು ಉಪೇಕ್ಷೆ ಮಾಡಿ ಹಳ್ಳಿಗಳನ್ನು ಅಲಕ್ಷಿಸಿದರು. ಇದೇ ನಮ್ಮ ಹಳ್ಳಿಗಳ ಅವನತಿಗೆ ಪ್ರಬಲವಾದ ಕಾರಣ. ಅಲ್ಲದೆ ಬ್ರಿಟಿಷರ ಆಳ್ವಿಕೆಯ ಪದ್ಧತಿಯಿಂದ ಸರ್ಕಾರದ ಆಡಳಿತವೆಲ್ಲಾ ಕೇಂದ್ರೀಕೃತವಾಗಿ (Centralised) ಜನಗಳು ತಮ್ಮ ಕೆಲಸವನ್ನು ತಾವು ಮಾಡಿಕೊಳ್ಳಬೇಕೆಂಬುದನ್ನು ಮರೆತು ಎಲ್ಲವನ್ನೂ ಸರ್ಕಾರದವರೇ ಮಾಡಬೇಕೆನ್ನುವ ತಪ್ಪು ಭಾವನೆಯು ಜನಗಳ ಮನಸ್ಸಿನಲ್ಲಿ ಬೇರೂರಿತು. ಅಲ್ಲದೆ ಪಾಶ್ಚಾತ್ಯ ದೇಶಗಳಲ್ಲಿ ಕೈಗಾರಿಕೆಯ ಪದ್ಧತಿಯಲ್ಲಿ ಉಂಟಾದ ಯಂತ್ರಗಳ ಪೈಪೋಟಿಯಿಂದ ನಮ್ಮ ಜನಗಳ ಕಸಬುಗಳಿಗೆಲ್ಲಾ ಧಕ್ಕೆ ತಗುಲಿತು. ನಗರಗಳ ಸಂಪರ್ಕದಿಂದ ನಮ್ಮ ಜನಗಳು ಹಿಂದೆ ಕಂಡರಿಯದ ದುಂದುವೆಚ್ಚದ ಹೊಸ ಅಭ್ಯಾಸಗಳನ್ನು ಕಲಿತರು. ಕೋಳಿ ಕೂಗುವ ಪ್ರತಿಯೊಂದು ಹಳ್ಳಿಯಲ್ಲಿಯೂ ಕಾಫಿ, ಟೀಗಳ ಬಳಕೆಯನ್ನು ನೋಡಬಹುದು. ಹಿಂದೆ ಹತ್ತಾರು ಮೈಲಿಗಳನ್ನು ಲಕ್ಷ್ಯವಿಲ್ಲದೆ ನಡೆಯುತ್ತಿದ್ದ ನಮ್ಮ ಜನಗಳು "ಕುದುರೆ ಕಂಡರೆ ಕಾಲು ನೋವು" ಎಂಬಂತೆ, ಒಂದೆರಡು ಮೈಲಿಗಳ ಪ್ರಯಾಣಕ್ಕೂ ಬಸ್ಸು ಮೋಟಾರುಗಳಿಗೆ ಕಾದು ಹಣ ತೆರುವುದು ಸಾಮಾನ್ಯ ಅನುಭವ. ತಾವು ಉಪಯೋಗಿಸುವ ಬಟ್ಟೆಬರೆಗಳು, ಇತರ ಸಾಧನ ಸಾಮುಗ್ರಿಗಳು ಕೂಡ ಹಣದ ಹೆಚ್ಚು ವೆಚ್ಚಕ್ಕೆ ಕಾರಣಗಳಾಗಿವೆ. ನಮ್ಮ ರೈತರ ಸಂಪಾದನೆಯಾದರೋ ಕಾಸಿನಷ್ಟೂ ಜಾಸ್ತಿಯಾಗಿಲ್ಲ. ಅವರು ಮಾಡುತ್ತಿರುವ ವ್ಯವಸಾಯ ಕ್ರಮವಂತೂ ತೀರ ಹಳೆಯದು. ಬೇರೆ

ಕಸಬುಗಳಿಲ್ಲದೆ ವ್ಯರ್ಥವಾಗಿ ಕಾಲಕಳೆಯುತ್ತ, ಬೇರೆ ಸಂಪಾದನೆಗೆ ಮಾರ್ಗವಿಲ್ಲದೆ ಆಲಸ್ಯಪರರಾಗಿ ಬಡತನದಲ್ಲಿ ಕಾಲಹರಣ ಮಾಡುತ್ತಿದ್ದಾರೆ. ಹೀಗಾಗಿ ರೈತರು ತಮ್ಮ ಸಾಧಾರಣ ಆಶಯಗಳನ್ನು ಪೂರ್ತಿಮಾಡಿಕೊಳ್ಳಬೇಕಾದರೂ ಸಾಲಮಾಡುವುದೊಂದೇ ದಾರಿಯಾಗಿದೆ. ಆದಾಯವಿಲ್ಲದೆ ಹೆಚ್ಚಾಗಿ ವೆಚ್ಚಮಾಡುವ ಜನಗಳಿಗೆ ಬಡತನವಲ್ಲದೇ ಮತ್ತೇನು ?

ಈ ಬಡತನಕ್ಕೆ ಜನಗಳು ಸಾಧಾರಣವಾಗಿ ಇಬ್ಬರನ್ನು ದೂರುವುದು ವಾಡಿಕೆಯಾಗಿದೆ: (1) ದೇವರು ; (2) ಸರ್ಕಾರ. ದೇವರ ವಿಷಯದಲ್ಲಿ ನಾವೇನೂ ಹೇಳಬೇಕಾಗಿಲ್ಲ. ಸರ್ಕಾರವು ಬಂದು ದೇಶದ ಎಲ್ಲ ಜನರ ಎಲ್ಲ ಅಪೇಕ್ಷೆಗಳನ್ನೂ ಈಡೇರಿಸಲು ಸಾಧ್ಯವಾಗುವುದಿಲ್ಲ. ಹಳ್ಳಿಯವರಲ್ಲಿ "ನಿಮ್ಮ ಬೀದಿಗಳನ್ನು ಗುಡಿಸಿ ಶುಚಿಯಾಗಿಟ್ಟುಕೊಳ್ಳಿರಿ" ಎಂದು ಹೇಳಿದರೆ, "ಸರ್ಕಾರದವರು ಕೂಲಿಗಳನ್ನಿಟ್ಟು ಗುಡಿಸಲಿ" ಎಂದು ಉತ್ತರ ಕೊಡುವ ಮನೋಭಾವವು ನೆಲೆಗೊಂಡಿದೆ. ಇದು ತಪ್ಪಾದ ಮತ್ತು ಹಾನಿಕರವಾದ ಅಭಿಪ್ರಾಯ. ತಮ್ಮ ಕೆಲಸವನ್ನು ತಾವೇ ಮಾಡಿಕೊಳ್ಳಬೇಕೆಂಬ ತತ್ವವನ್ನು ಅರಿತ ಹೊರತು ಯಾರೂ ಏಳಿಗೆ ಹೊಂದಲಾರರು. ಕೇವಲ ದಾರಿ ತೋರಿಸಬಲ್ಲ ಸರ್ಕಾರದೊಡನೆ ಸಹಕರಿಸಿ ಉದ್ಯಮಗೈಯಬೇಕಾದದ್ದು ಜನಗಳ ಕರ್ತವ್ಯ. ನಮ್ಮ ಸರ್ಕಾರದವರು ಕೈಗೊಂಡಿರುವ ಗ್ರಾಮಾಭಿವೃದ್ಧಿ ಕಾರ್ಯಗಳು ಪ್ರಶಂಸನೀಯವಾದುವುಗಳು. ಜನಗಳು ಈ ಕೆಲಸದಲ್ಲಿ ಸರ್ಕಾರಕ್ಕೆ ನೆರವಾಗುವುದರ ಬದಲು ಆಕ್ಷೇಪಣೆ ಮಾಡಿದರೆ ಉಪಯೋಗವಿಲ್ಲ. "ಸಾವಿರ

ನಾರಿ ಗೋವಿಂದ ಎನ್ನಬಹುದು; ಒಬ್ಬ ದಾಸಯ್ಯನಿಗೆ ಭಿಕ್ಷ ಹಾಕುವುದು ಕಷ್ಟ'' ಎಂಬಂತೆ ಕಾರ್ಯಸಾಧನೆ ನಿಜವಾಗಿಯೂ ಕಷ್ಟ. ಆದ್ದರಿಂದ ಗ್ರಾಮಗಳ ಏಳಿಗೆಗೆ ಜನಗಳೂ, ಸರ್ಕಾರದವರೂ ಒಗ್ಗಟ್ಟಾಗಿ ಸೇರಿ ದುಡಿಯ ಬೇಕು.

## II. ವ್ಯವಸಾಯ, ಉಪಕಸಬು, ವ್ಯಾಪಾರ

ನಮ್ಮ ಹಳ್ಳಿಗಳು ಹೇಗೆ ಉತ್ತಮರೀತಿಯಲ್ಲಿದ್ದುವು, ಜನ ಗಳಲ್ಲಿ ಸಮಾಧಾನ, ಶಾಂತಿ ಇವುಗಳು ನೆಲೆಸಿದ್ದುವು ಎಂಬು ದನ್ನು ತಿಳಿಸಿದ್ದಾಯಿತು. ಕ್ರಮೇಣ ನಮ್ಮ ಗ್ರಾಮಗಳು ಹೇಗೆ ಯಾವ ಕಾರಣಗಳಿಂದ ಹೀನಸ್ಥಿತಿಗೆ ಬಂದುವೆಂಬು ದನ್ನೂ ವಿವರಿಸಿದ್ದಾಯ್ತು. ನಮ್ಮ ದೇಶ ಅಭಿವೃದ್ಧಿಯಾಗ ಬೇಕಾದರೆ ನಮ್ಮ ಹಳ್ಳಿಗಳ ಸುಧಾರಣೆಯಾಗಬೇಕು. ಇಂದು ನಮ್ಮ ಹಳ್ಳಿಗಳಲ್ಲಿ ಕಂಡುಬರುವ ದುಡ್ಡಿನ ಬಡತನ, ಧೈರ್ಯದ ಬಡತನ, ದೇಶಭಕ್ತಿಯ ಬಡತನ, ನಿರುತ್ಸಾಹ, ನಿರುದ್ಯೋಗ— ಇವುಗಳನ್ನು ನಿವಾರಿಸಬೇಕಾದುದು ಅತ್ಯಾವಶ್ಯಕ. ನಮ್ಮ ಜನಗಳ ಮುಖ್ಯ ಕಸಬು ಬೇಸಾಯ. ಹಿಂದೆ ಹೇಳಿದಂತೆ ನಮ್ಮ ಮೈಸೂರು ಸೀಮೆಯಲ್ಲಿರುವ 16,483 ಹಳ್ಳಿಗಳಲ್ಲಿ ಶೇಕಡಾ 80 ಕ್ಕಿಂತ ಜಾಸ್ತಿಯಾಗಿ ಜನ ಗಳು ಬೇಸಾಯವನ್ನೇ ನಂಬಿರುತ್ತಾರೆ. ಬಹಳ ಪುರಾತನ ಕಾಲದಿಂದಲೂ ಬೇಸಾಯವು ರೂಢಿಯಲ್ಲಿದೆ. ವ್ಯವಸಾಯವೇ ಮುಖ್ಯ ಕಸಬಾದರೂ ನಮ್ಮ ಬೇಸಾಯ ಪದ್ಧತಿಯು ತೀರಾ ಹಿಂದುಳಿದಿದೆ. ನಮ್ಮ ರೈತರ ಉತ್ಪತ್ತಿಯು ಇತರ ದೇಶಗಳ ಉತ್ಪತ್ತಿಗಿಂತ ಅತಿ ಕಡಿಮೆ. ಉದಾಹರಣೆ ಯಾಗಿ ಎಕರೆ ಒಂದಕ್ಕೆ ಇಟಲಿಯಲ್ಲಿ 4,601 ಪೌಂಡುಗಳಷ್ಟು

ಭತ್ತವೂ, 1,241 ಪೌಂಡುಗಳಷ್ಟು ಗೋಧಿಯೂ, ಜಪಾನ್ ದೇಶದಲ್ಲಿ 2,742 ಪೌಂಡುಗಳಷ್ಟು ಭತ್ತವೂ ಮತ್ತು 1,508 ಪೌಂಡು ಗೋಧಿಯೂ ಬೆಳೆದರೆ ಇಂಡಿಯಾದೇಶದಲ್ಲಿ 1,357 ಪೌಂಡು ಭತ್ತವೂ, 652 ಪೌಂಡುಗಳಷ್ಟು ಗೋಧಿಯೂ ಮಾತ್ರ ಉತ್ಪತ್ತಿಯಾಗುತ್ತದೆ.[1] ಇದರಿಂದ ನಮ್ಮ ವ್ಯವಸಾಯಕ್ರಮ ಎಷ್ಟು ಹಿಂದುಳಿದಿದೆ ಎಂಬುದನ್ನು ಮನಗಾಣಬಹುದು.

ನಮ್ಮ ಬೇಸಾಯ ಪದ್ಧತಿಯು ಹಿಂದುಳಿದಿರುವುದಕ್ಕೆ ಅನೇಕ ಕಾರಣಗಳುಂಟು. ಇವುಗಳಲ್ಲಿ ಮೊದಲನೆಯದು ನಮ್ಮಲ್ಲಿ ಆಚರಣೆಯಲ್ಲಿರುವ ಜಮೀನು ಹಂಚಿಕೆ ಪದ್ಧತಿ. ಒಬ್ಬ ತಂದೆಗೆ ನಾಲ್ಕು ಮಕ್ಕಳಿದ್ದರೆ ತಂದೆಯ ಆಸ್ತಿಯಲ್ಲಿ ಎಲ್ಲರಿಗೂ ಸಮಭಾಗ ಬರಬೇಕಾಗುವುದು. ಅದಲ್ಲದೆ ಸಾಧಾರಣವಾಗಿ ಜಮೀನು ಯಾರಿಗೂ ಒಂದೇಕಡೆ ಇರುವುದಿಲ್ಲ. ಹೀಗೆ ಬೇರೆ ಬೇರೆ ತಾಕುಗಳಲ್ಲಿರುವ ಜಮೀನು ಹಂಚಿಕೆಯಾಗುವುದರಿಂದ ನಮ್ಮ ದೇಶದ ಜಮೀನು ಛಿದ್ರಛಿದ್ರವಾಗಿ ಉತ್ತಮ ಬೇಸಾಯಕ್ಕೆ ಅಡಚಣೆಯಾಗಿದೆ. ಮೈಸೂರು ಸರ್ಕಾರದವರು ನೇಮಿಸಿದ್ದ ಕಮಿಟಿಯವರು ನಡೆಸಿದ ಪರಿಶೋಧನೆಗಳಿಂದ ಶೇಕಡಾ 20 ರಂತೆ ಒಂದೆಕರೆಗಿಂತಲೂ ಚಿಕ್ಕವಾದ ತಾಕುಗಳಿವೆಯೆಂತಲೂ, ಶೇಕಡಾ 40 ರಂತೆ 5 ರಿಂದ 10 ಎಕರೆಗಳೊಳಗೆ ಉಳ್ಳ ತಾಕುಗಳಿವೆಯೆಂತಲೂ ಕಂಡುಬರುತ್ತದೆ. 50 ಎಕರೆಗಿಂತ ಜಾಸ್ತಿಯಾಗಿರುವ ಜಮೀನುಗಳು ಶೇಕಡಾ 1·5 ಮಾತ್ರ. ಹೀಗೆ ಜಮೀನು ಛಿದ್ರವಾಗಿ ಛಿನ್ನವಾಗಿರುವುದರಿಂದ, ಯಾವ ಉತ್ತಮ ಬೇಸಾಯಕ್ಕೂ ಅವಕಾಶ

[1] "Planned Economy for India", by Sir M. Visvesvaraya.

ವಿರುವುದಿಲ್ಲ. ಎಲ್ಲರೂ ಒಂದೇ ಕಾಲದಲ್ಲಿ ಒಂದೇ ರೀತಿಯಾದ ಬೆಳೆಗಳನ್ನು ಬೆಳೆಯಬೇಕಾಗಿರುತ್ತದೆ. ಜಮೀನುಗಳಿಗೆ ಬೇಲಿಗಳಿಲ್ಲದಿರುವುದರಿಂದ ಅನೇಕವೇಳೆ ಜಗಳಕ್ಕೆ ಮುಖ್ಯ ಕಾರಣವಾಗುತ್ತದೆ. ನಮ್ಮ ವ್ಯವಸಾಯಕ್ರಮ ಉತ್ತಮ ಗೊಳ್ಳಬೇಕಾದರೆ ಜಮೀನು ಹಂಚಿಕೆಯ ನ್ಯೂನತೆಯನ್ನು ಸರಿಪಡಿಸಬೇಕಾದ್ದು ಆವಶ್ಯಕ. ಇದಕ್ಕಾಗಿ ಪ್ರಯತ್ನಗಳು ಇಂಡಿಯಾ ದೇಶದ ಅನೇಕ ಭಾಗಗಳಲ್ಲಿ ನಡೆದಿವೆ. ಪಂಜಾಬಿ ನಲ್ಲಿ ಸಹಕಾರ ಪದ್ಧತಿಯಿಂದ ತಾಕುಗಳನ್ನು ಒಟ್ಟುಗೂಡಿ ಸುವ ಪ್ರಯತ್ನಮಾಡಿದ್ದಾರೆ. ಬರೋಡಾ ಸರ್ಕಾರದವರು ರೈತರಿಗೆ ಇಷ್ಟವಿದ್ದರೆ ಜಮೀನು ಒಟ್ಟುಗೂಡಿಸಲು ಅನುಕೂಲವಾಗುವಂತೆ ಒಂದು ಕಾನೂನು ಮಾಡಿರುತ್ತಾರೆ. ಮಧ್ಯಪ್ರಾಂತದಲ್ಲಿಯೂ ಇದಕ್ಕಾಗಿ ಕಾನೂನನ್ನು ಮಾಡಿ ದ್ದಾರೆ. ಮೈಸೂರು ಸರ್ಕಾರದವರು ಈ ನ್ಯೂನತೆಯನ್ನು ಹೋಗಲಾಡಿಸಲು ಕೆಲವು ಪ್ರಯತ್ನಗಳನ್ನು ನಡೆಸಿರುತ್ತಾರೆ. ಆದರೆ ಅವುಗಳಿಂದ ಎಷ್ಟರ ಮಟ್ಟಿಗೆ ಉಪಯೋಗವಾಗಿದೆ ಎಂದು ನಿರ್ದಿಷ್ಟವಾಗಿ ಹೇಳುವುದು ಕಷ್ಟ. ಅಂತೂ ಜಮೀನು ಛಿದ್ರವಾಗಿರುವುದರಿಂದ, ಬೇಸಾಯಕ್ರಮಕ್ಕೆ ತುಂಬಾ ಹಾನಿಯೆಂಬುದನ್ನು ನಮ್ಮ ರೈತರು ತಿಳಿಯು ವಂತಾಗಬೇಕು. ನಮ್ಮ ಬೇಸಾಯ ಪದ್ಧತಿಯ ಹೀನಸ್ಥಿತಿಗೆ ಮುಖ್ಯ ಕಾರಣ ನಮ್ಮ ರೈತರ ಅಜ್ಞಾನ. ವ್ಯವಸಾಯಕ್ಕೆ ಬಹು ಮುಖ್ಯವಾಗಿ ಬೇಕಾದ್ದು ಗೊಬ್ಬರ. ಗೊಬ್ಬರದ ಬೆಲೆ ನಮ್ಮ ರೈತರಿಗೆ ಚೆನ್ನಾಗಿ ಗೊತ್ತು. ಗೊಬ್ಬರವು ರೈತನ ಚಿನ್ನವೆಂದು ಅವರು ಅರಿತಿದ್ದಾರೆ. ಆದರೆ ಗೊಬ್ಬರವನ್ನು ಕಾಪಾಡುತ್ತಿರುವ ರೀತಿ ಅಸಮರ್ಪಕವಾಗಿದೆ. ಸಾಧಾರಣ

ವಾಗಿ ಮನೆಯಲ್ಲಿ ಕಸ, ಕಡ್ಡಿ, ಸಗಣಿ ಮುಂತಾದುವುಗಳನ್ನು ತೆಗೆದುಕೊಂಡುಹೋಗಿ ಗುಡ್ಡೆ ಹಾಕುವುದು ರೂಢಿಯಾಗಿದೆ. ಇದರಿಂದ ಗೊಬ್ಬರವು ಬಿಸಿಲಲ್ಲಿ ಒಣಗಿ ಅದರ ಸಾರವೆಲ್ಲಾ ಹೋಗುವುದಲ್ಲದೆ, ವಿಶೇಷ ಮಳೆ ಬಂದಾಗ ಅದರ ಸಾರ ವೆಲ್ಲಾ ಕೊಚ್ಚಿಹೋಗಿ ಹಳ್ಳಗಳಲ್ಲಿ ನೀರು ನಿಂತು, ಕೊಳೆತು ಊರಿನ ಆರೋಗ್ಯವನ್ನು ಕೆಡಿಸುತ್ತದೆ. ಸಾಧಾರಣವಾಗಿ ಯಾರೊಬ್ಬರು ಹಳ್ಳಿಗಳಿಗೆ ಹೋದರೂ ಈ ತರಹ ಗೊಬ್ಬರದ ಗುಡ್ಡೆಯನ್ನು ನೋಡಬಹುದು. ಬ್ರೈನ್ ಎಂಬ ದೊಡ್ಡ ವಿದ್ವಾಂಸರು ಹೇಳಿರುವಂತೆ ನಮ್ಮ ಹಳ್ಳಿಗಳಿಗೆ ಗುರ್ತು ಬೇಕಾದರೆ ಅವುಗಳಿಂದ ಬರತಕ್ಕ ದುರ್ವಾಸನೆ! ಆರೋಗ್ಯಕ್ಕೆ ತೌರುಮನೆಯಾಗಿದ್ದ ನಮ್ಮ ಹಳ್ಳಿಗಳು ಈಗ ದುರ್ಗಂಧದ ಕೂಪಗಳಾಗಿವೆ. ಈ ಪದ್ಧತಿಯಿಂದ ಹಳ್ಳಿಯವರಿಗೆ ಎರಡು ತರಹ ನಷ್ಟ: (1) ಗೊಬ್ಬರದ ಸಾರ ಹೋಗುವುದು; (2) ಊರಿನ ಆರೋಗ್ಯ ಕೆಡುವುದು.

ಹಳ್ಳಿಗಳಲ್ಲಿ ಈ ಗೊಬ್ಬರವನ್ನು ಪ್ರತ್ಯೇಕವಾದ ಗುಂಡಿಗಳಲ್ಲಿ ಹಾಕಿ ಮಣ್ಣುಮುಚ್ಚುವಂತೆ ರೈತರಲ್ಲಿ ಪ್ರಚಾರವಾಗಬೇಕು. ಅಲ್ಲದೆ ನಮ್ಮ ರೈತರು ಗಂಜಲವನ್ನು ವ್ಯರ್ಥ ಮಾಡುತ್ತಾರೆ. ಗಂಜಲವು ಶ್ರೇಷ್ಠವಾದ ಗೊಬ್ಬರ. ಇದನ್ನು ಕೂಡ ವ್ಯರ್ಥವಾಗದಂತೆ ಹಿಡಿದು ಕಸದ ಜೊತೆಗೆ ಸೇರಿಸಬೇಕು. ಇದರಿಂದ ಗೊಬ್ಬರ ಕೊಳೆತು ಪಾಕಾಗಲು ಅವಕಾಶವಾಗುವುದು. ಸಾಧಾರಣವಾಗಿ ಹಳ್ಳಿಗಳಲ್ಲಿ ಸಗಣಿಯನ್ನು ಬೆರಣಿಯಾಗಿ ಮಾಡಿ ಉರಿಸುವ ಪದ್ಧತಿಯಾಗಿದೆ. ಇದರಿಂದ ನಮ್ಮ ಬೇಸಾಯಕ್ಕೆ ಅಪಾರವಾದ ನಷ್ಟ. ಸಾಧಾರಣವಾಗಿ ಬೆರಣಿಯನ್ನು ನಿಧಾನವಾಗಿ ಕಾಯಬೇಕಾಗಿರುವ ಹಾಲು,

ತರಕಾರಿ ಮುಂತಾದುವುಗಳಿಗೆ ಉಪಯೋಗಿಸುವುದು ರೂಢಿ. ಇದಕ್ಕೆ ಬದಲಾಗಿ ನೆಲದಲ್ಲಿ ಒಂದು ಗುಂಡಿಯನ್ನು ತೋಡಿ ಅದರಲ್ಲಿ ಭತ್ತದ ಹುಲ್ಲನ್ನು ತುಂಬಿ ನಿಧಾನ ವಾಗಿ ಪಕ್ವವಾಗಬೇಕಾಗಿರುವ ಪದಾರ್ಥವನ್ನು ಮೊದಲೆ ಸೌದೆಯ ಒಲೆಯ ಮೇಲಿಟ್ಟು ಕುದಿಸಿ ಆಮೇಲೆ ಆ ಪಾತ್ರೆ ಯನ್ನು ಬಾಯಿಮುಚ್ಚಿ, ತಳವನ್ನು ಒರಸಿ ಹುಲ್ಲಿನೊಳಗಿಟ್ಟು ಮುಚ್ಚುವುದರಿಂದ ಕೆಲವು ಗಂಟೆಗಳ ಕಾಲ ಶಾಖವು ಸ್ವಲ್ಪವೂ ಕಡಿಮೆಯಾಗದಂತೆ ನಿಲ್ಲುವುದು. ಇದರಿಂದ ಬೆರಣಿಯ ಉಪಯೋಗವಿಲ್ಲದೇ ಪದಾರ್ಥಗಳನ್ನು ಪಕ್ವಮಾಡಬಹುದು.[2] ಮತ್ತು ಈ ಸಗಣಿಯನ್ನು ಜಮೀನಿಗೆ ಉಪಯೋಗಿಸುವುದ ರಿಂದ ಉತ್ಪತ್ತಿಯೂ ಹೆಚ್ಚಲವಕಾಶವಾಗುವುದು. ಅಲ್ಲದೆ ಜನರು ದಾರಿಯಲ್ಲೆಲ್ಲಾ ಹೇಸಿಗೆಮಾಡಿ ಕೆರೆ, ಕೊಳಗಳಿದ್ದರೆ ಅವುಗಳ ತಡಿಯಲ್ಲಿ ಮಲವಿಸರ್ಜನೆಮಾಡುವ ಅಸಹ್ಯಕರ ವಾದ ಪದ್ಧತಿಯು ನಮ್ಮ ಹಳ್ಳಿಗಳಲ್ಲಿದೆ. ಇದರಿಂದ ಊರಿನ ಆರೋಗ್ಯವು ವಿಶೇಷವಾಗಿ ಕೆಡುವುದಲ್ಲದೆ ಉತ್ತಮ ವಾದ ಗೊಬ್ಬರವೂ ವ್ಯರ್ಥವಾಗುತ್ತಿದೆ. ಈ ಪದ್ಧತಿಯಿಂದ ನಮ್ಮ ರೈತರಿಗೆ ಸುಮಾರು ವರ್ಷಕ್ಕೆ ಎಂಟು ಕೋಟಿ ರೂಪಾಯಿಗಳು ನಷ್ಟವಾಗುತ್ತಿದೆಯೆಂದು ನಿರ್ಣಯಿ ಸಿದ್ದಾರೆ. ಇದಕ್ಕೆ ಬದಲಾಗಿ ಕಕ್ಕಸಗಳ ಉಪಯೋಗವನ್ನು ಹಳ್ಳಿಗಳಲ್ಲಿ ಪ್ರಚಾರಮಾಡುವುದರಿಂದ ರೈತರ ಉತ್ಪತ್ತಿ ಹೆಚ್ಚಲು ಅವಕಾಶವಾಗಬಹುದು.)

ಉತ್ತಮ ಬೆಳೆ ಬರಬೇಕಾದರೆ ಒಳ್ಳೆ ಬೀಜವು ಅವಶ್ಯಕ ವೆಂಬುದನ್ನು ರೈತರು ಬಲ್ಲರು. "ಬೀಜದಂತೆ ವೃಕ್ಷ"

---

[2] "Better Villages", by Brayne.

ಎಂಬುದು ಹಳ್ಳಿಯಲ್ಲಿ ಮನೆ ಮಾತು. ಆದರೆ ಬೀಜದ ವಿಷಯದಲ್ಲಿಯೂ ರೈತರಿಗೆ ನಿಗಾ ಕಡಿಮೆ. ವ್ಯವಸಾಯದ ಇಲಾಖೆಯವರು ಪರಿಶೋಧನೆ ನಡೆಸಿ ಉತ್ತಮ ಬೀಜಗಳ ನ್ನೊದಗಿಸಲು ಪ್ರಯತ್ನಿಸುತ್ತಿದ್ದಾರೆ. ಆದರೆ ನಮ್ಮ ರೈತರಿಗೆ ಅವುಗಳಲ್ಲಿ ಇನ್ನೂ ನಂಬಿಕೆ ಹುಟ್ಟಿಲ್ಲ. ಇದಕ್ಕೆ ರೈತರ ಜಮೀನಿನಲ್ಲಿಯೇ ಉತ್ತಮವಾದ ಬೀಜಗಳನ್ನು ಉಪಯೋಗಿಸಿ ಪ್ರಯೋಗಗಳನ್ನು ನಡೆಸುವುದರಿಂದ (Demonstration) ಅವರಲ್ಲಿ ನಂಬಿಕೆ ಹುಟ್ಟಬಹುದು. ಅಂತು ಉತ್ತಮ ತರಹೆಯ ಬೀಜಗಳ ಪ್ರಚಾರ ನಮ್ಮ ದೇಶ ದಲ್ಲಿ ಹೆಚ್ಚಾಗಿ ನಡೆಯಬೇಕು. ನಮ್ಮ ರೈತನು ಉಪ ಯೋಗಿಸುವ ವ್ಯವಸಾಯದ ಮುಟ್ಟುಗಳು ತೀರ ಹಳೆಯವು. ಆದರೆ ಬೇರೆ ದೇಶಗಳಂತೆ ಆಧುನಿಕ ಯಂತ್ರಗಳನ್ನು ನಮ್ಮ ರೈತರು ಉಪಯೋಗಿಸಲಾರರು. ಆದರೂ ನಮ್ಮ ಸ್ಥಿತಿಗನು ಗುಣವಾಗಿ ಮೈಸೂರು ಸರ್ಕಾರದವರು ಪ್ರಚಾರಮಾಡು ತ್ತಿರುವ ಕೋಲಾರ ಮಿಷನ್ ನೇಗಿಲು, ಯುರೇಕಾ ನೇಗಿಲು ಇವನ್ನಾದರೂ ರೈತರು ಉಪಯೋಗಿಸಬಹುದು. ಇದರಿಂದ ಜಮೀನನ್ನು ಆಳವಾಗಿ ಉಳಲು ಅವಕಾಶವಾಗುವುದು. ಪೈರುಗಳು ಹುಲುಸಾಗಿ ಬೆಳೆಯುವುವು. ನಮ್ಮ ವ್ಯವಸಾಯದ ಹೀನಸ್ಥಿತಿಗೆ ಮಳೆಯನ್ನೇ ನಂಬಿಕೊಂಡಿರು ವುದು ಒಂದು ದೊಡ್ಡ ಕಾರಣ. ಕಾಲದಲ್ಲಿ ಎರಡು ದಿನ ಮಳೆ ಬಾರದೆಹೋದರೆ ರೈತರ ಹಾಹಾಕಾರವನ್ನು ಹೇಳತೀರದು. ಈಗಲೂ ಊರಿನ ಜೋಯಿಸರನ್ನು ಮಳೆ ಯಾವಾಗ ಬರುತ್ತೆಂದು ಕೇಳುವುದು ಸಾಧಾರಣ. ನಮ್ಮ ದೇಶದ ಬೇಸಾಯವನ್ನು "ಮಳೆಯೊಡನೆ ಜೂಜಾಡಿದಂತೆ" ಎಂದು

ವರ್ಣಿಸಿದ್ದಾರೆ. ಇದು ಸಹಜ. ಈ ಕುಂದು ನಿವಾರಣೆ ಯಾಗಬೇಕಾದರೆ ನೀರಾವರಿ ಅನುಕೂಲ ಹೆಚ್ಚಬೇಕು. ಮೈಸೂರು ಸರ್ಕಾರದವರು ಸಾಧ್ಯವಾದ ಕಡೆಯಲ್ಲೆಲ್ಲಾ ನೀರಾವರಿಯ ಅನುಕೂಲಕ್ಕೆ ಗಮನ ಕೊಡುತ್ತಿರುವುದು ಎಲ್ಲರಿಗೂ ತಿಳಿದಿದೆ. ನಮ್ಮ ದೇಶದಲ್ಲಿ ಸುಮಾರು ಇಪ್ಪತ್ತು ನಾಲ್ಕು ಸಾವಿರ ಕೆರೆಗಳಿವೆ. ಇವುಗಳನ್ನು ಸಾಧಾರಣವಾಗಿ ರಿಪೇರಿ ಮಾಡಿಕೊಳ್ಳಬೇಕಾದರೂ ನಮ್ಮ ರೈತರು ಸರ್ಕಾರದ ಸಹಾಯವನ್ನೇ ನಿರೀಕ್ಷಿಸುತ್ತಿರುತ್ತಾರೆ. ಇದು ಸಮ್ಮತ ವಲ್ಲ. ಊರಿನವರೆಲ್ಲರೂ ಒಟ್ಟಾಗಿ ಸೇರಿ ಪ್ರಯತ್ನಮಾಡಿ ದರೆ ಸುಲಭವಾಗಿ ಕೆಲಸಗಳನ್ನು ಮಾಡಿಕೊಳ್ಳಬಹುದು. ಉದಾಹರಣೆಗಾಗಿ ಪ್ರತಿ ವರ್ಷವೂ ಬರುತ್ತಿರುವ ಮೆಕ್ಕಲಿ ನಿಂದ ಕೆರೆಯ ಆಳವು ಕಡಿಮೆಯಾಗುತ್ತಿದ್ದರೆ, ಆ ಮಣ್ಣನ್ನು ಅಗೆದು ಹೊಲಗಳಿಗೆ ಗೊಬ್ಬರವಾಗಿ ಉಪಯೋಗಿಸಬಹುದು. ಇದರಿಂದ ಕೆರೆಗಳಲ್ಲಿ ಹೆಚ್ಚು ನೀರು ನಿಲ್ಲಲು ಅವಕಾಶವಾಗು ವುದು. ರೈತನ ಬೇಸಾಯಕ್ಕೆ ಮುಖ್ಯವಾದ ಅಂಗ ದನಕರು ಗಳು. ನಮ್ಮ ರೈತರಲ್ಲನೇಕರು ಒಂದು ಜೊತೆ ಎತ್ತು ಕೂಡ ಇಲ್ಲದೆ ಹಸುವನ್ನೋ ಮತ್ತು ಒಂದು ಕೋಣವನ್ನೋ ಇಟ್ಟುಕೊಂಡು "ಎತ್ತಿಲ್ಲದವನಿಗೆ ಕೋಣನೇ ಸಂಜೀವ" ಎಂಬಂತೆ ಆರಂಬ ಮಾಡುತ್ತಿರುವುದನ್ನು ನೋಡಬಹುದು. ನಮ್ಮ ದೇಶದ ದನಗಳು ಒಂದಾನೊಂದು ಕಾಲದಲ್ಲಿ ಪ್ರಸಿದ್ಧ ವಾಗಿದ್ದುವು. ಹಳ್ಳಿಕಾರ ದನ, ಅಮೃತಮಹಲ್ ದನ, ಬೆಟ್ಟದ ದನಗಳೆಂದು ನಮ್ಮ ರಾಸುಗಳು ಬಹಳ ಹೆಸರು ಪಡೆದಿದ್ದುವು. ಮೈಸೂರಿನ ಮಕ್ಕಳೆಲ್ಲರೂ ಗೋವಿನ ಕಥೆ ಯಲ್ಲಿ ಓದಿರುವ ಕರ್ನಾಟಕದ ವರ್ಣನೆಯನ್ನು ಜ್ಞಾಪಿಸಿ

ಕೊಂಡರೆ ಸಾಕು. ಆದರೆ ಇಂದು ನಮ್ಮ ಹಳ್ಳಿಯಲ್ಲಿ ದನ ಕರುಗಳ ಸ್ಥಿತಿ ತುಂಬಾ ಶೋಚನೀಯವಾಗಿದೆ. ಅವುಗಳಿಗೆ ಸರಿಯಾದ ಮೇವಿಲ್ಲದೆ ರೋಗಗಳಿಂದ ನರಳಿ ಅವುಗಳ ತಳಿಯೂ ಕೂಡ ಹೀನಸ್ಥಿತಿಗೆ ಬರುತ್ತಿದೆ. ಜನಗಳಿಗೇ ಹೊಟ್ಟೆಗಿಲ್ಲ, ದನಗಳ ಮಾತೇನು! ದನಗಳ ಹೀನಸ್ಥಿತಿಯಿಂದ ಹಾಲು, ಮೊಸರು, ಬೆಣ್ಣೆಗಳಿಗೆ ಆಗರವಾಗಿ ಕೃಷ್ಣನ ಲೀಲೆ ಗಳಿಂದ ಶೋಭಿಸುತ್ತಿದ್ದ ಹಳ್ಳಿಗಳಲ್ಲಿ ಇಂದು ಹಾಲಿಗೆ ಅಭಾವವಾಗಿದೆ. "ಕ್ಷೀರಸಾಗರಭಟ್ಟ ಎಂದು ಹೆಸರು, ಮನೆಯಲ್ಲಿ ಮಜ್ಜಿಗೆ ನೀರಿಗೆ ಅಭಾವ" ಎಂಬಂತೆ ಹಳ್ಳಿ ಗಳಲ್ಲಿ ಹಾಲು ಮೊಸರಿಗೆ ತುಂಬಾ ಕಷ್ಟ. ಇದನ್ನು ನಿವಾರಿಸ ಬೇಕಾದರೆ ದನಗಳಿಗೆ ಮೇವು ಸಮೃದ್ಧಿಯಾಗಿ ಒದಗುವಂತೆ ಹೊಸ ಬೆಳೆಗಳ ಪ್ರಚಾರವಾಗಬೇಕು. ಅಲ್ಲದೆ ನಮ್ಮ ರೈತರು ಬೆಳೆಯುವ ಜೋಳ, ಹಸಿಹುಲ್ಲು ಮುಂತಾದು ವುಗಳನ್ನು ಕೆಡದಂತೆ ಕಾಪಾಡುವ 'Silopits' ಸೈಲೋಗುಣಿ ಹೆಚ್ಚು ರೂಢಿಗೆ ಬರಬೇಕು. ದನಗಳ ತಳಿ ಉತ್ತಮವಾಗ ಬೇಕಾದರೆ ಒಳ್ಳೆಯ ಬೀಜದ ಹೋರಿಗಳನ್ನು ಹಳ್ಳಿಗಳಲ್ಲಿ ಉಪಯೋಗಿಸಬೇಕು. ಹಿಂದೆ ನಮ್ಮ ಹಳ್ಳಿಗಳಲ್ಲಿದ್ದ 'ಬಸವನ' ಪದ್ಧತಿ ಇದಕ್ಕೆ ನಿದರ್ಶನವಾಗಿದೆ. ಈ ಸಂದರ್ಭ ದಲ್ಲಿ ಮೈಸೂರು ಸರ್ಕಾರದವರು ವಿಶೇಷ ಪ್ರಯತ್ನ ನಡೆಸು ತ್ತಿದ್ದಾರೆ. ರೈತರ ಉಪಯೋಗಕ್ಕಾಗಿ ಉತ್ತಮವಾದ ಬೀಜದ ಹೋರಿಗಳನ್ನು ಸುಲಭ ಬೆಲೆಗೆ ಸಿಕ್ಕುವಂತೆ ಏರ್ಪಾಟು ಮಾಡಿರುತ್ತಾರೆ. ಈ ಮೇಲೆ ಹೇಳಿದ ಕೆಲವು ಸಲಹೆಗಳನ್ನು ಅನುಸರಿಸುವುದರಿಂದ ವ್ಯವಸಾಯ ಪದ್ಧತಿ ಯನ್ನು ಉತ್ತಮಗೊಳಿಸಿ ರೈತರು ತಮ್ಮ ವರಮಾನವನ್ನು ಹೆಚ್ಚಿಸಿಕೊಳ್ಳಲವಕಾಶವಾಗುವುದು.

ವ್ಯವಸಾಯದ ಜೊತೆಗೆ ನಮ್ಮ ರೈತರಿಗೆ ಮುಖ್ಯವಾಗಿ ಉಪಕಸಬುಗಳಿರಬೇಕು. ಹಿಂದಿನ ಹಳ್ಳಿಗಳಲ್ಲಿ ನಮ್ಮ ರೈತರು ಉಪಕಸಬುಗಳನ್ನಿಟ್ಟುಕೊಂಡಿದ್ದರು. ಈಗಲೂ ಮುಂದರಿದ ಅನೇಕ ದೇಶಗಳಲ್ಲಿ ರೈತರು ಸಣ್ಣ ಕಸಬುಗಳನ್ನಿಟ್ಟುಕೊಂಡೇ ಇರುತ್ತಾರೆ. ಸಾಧಾರಣವಾಗಿ ನಮ್ಮ ರೈತರಿಗೆ ವರ್ಷವೆಲ್ಲಾ ಕೆಲಸವಿರುವುದಿಲ್ಲ. ಸುಗ್ಗಿಯು ಕಳೆದಮೇಲೆ ಪುನಃ ಮಳೆ ಬೀಳುವವರೆಗೂ ಅವರು ವ್ಯರ್ಥವಾಗಿ ಕಾಲ ಕಳೆಯುತ್ತಿರುತ್ತಾರೆ. ಈ ವಿಷಯದಲ್ಲಿ ಪರಿಶೀಲನೆ ನಡೆಸಿರುವ ಅನೇಕ ವಿದ್ವಾಂಸರ ಅಭಿಪ್ರಾಯದಲ್ಲಿ ವರ್ಷಕ್ಕೆ ನಾಲ್ಕು ತಿಂಗಳಾದರೂ ನಮ್ಮ ರೈತರು ವ್ಯರ್ಥವಾಗಿ ಕಾಲ ಕಳೆಯುತ್ತಾರೆಂದು ತಿಳಿದುಬರುತ್ತದೆ. ರೈತರು ವಿರಾಮ ಕಾಲದಲ್ಲಿ ಹೆಚ್ಚು ಬಂಡವಾಳವಿಲ್ಲದೆ ಮಾಡಬಹುದಾದ ಕಸಬುಗಳು ಅನೇಕವಾಗಿವೆ. ಹಳ್ಳಿಗಳ ಕೈಗಾರಿಕೆಗಳನ್ನು ಪುನರುಜ್ಜೀವನಗೊಳಿಸಬೇಕೆನ್ನುವ ಉದ್ದೇಶದಿಂದಲೇ ಮಹಾತ್ಮಾ ಗಾಂಧಿಯವರು ಭಾರತೀಯ ಕೈಗಾರಿಕೆಗಳ ಅಭಿವೃದ್ಧಿ ಸಂಘವನ್ನು ಸ್ಥಾಪಿಸಿ ತಾವು ಷೇಗಾವ್ ಹಳ್ಳಿಯಲ್ಲಿ ನೆಲೆಸಿರುತ್ತಾರೆ. ನಮ್ಮ ರೈತರು ಮಾಡಬಹುದಾದ ಕೆಲಸಗಳಲ್ಲಿ ರಾಟೆ ಅಥವಾ ಚರಕದ ಕೆಲಸ ಸುಲಭಸಾಧ್ಯವಾದುದು. ಹಿಂದೆ ನಮ್ಮ ರೈತರು ತಮ್ಮ ಬಟ್ಟೆಗೆ ಬೇಕಾಗುವ ಹತ್ತಿಯನ್ನು ಬೆಳೆದು ನೂಲುತೆಗೆದು ಕೈಮಗ್ಗದಿಂದ ಬಟ್ಟೆಗಳನ್ನು ಮಾಡಿಸಿಕೊಳ್ಳುತ್ತಿದ್ದರು. ಒಬ್ಬ ರೈತನಿಗೆ ಸುಮಾರು 10–14 ಗಜ ಬಟ್ಟೆಗಳಾದರೆ ಸಮೃದ್ಧಿ. ಒಂದು ಮಣ ಹತ್ತಿ ಬೆಳೆದರೆ, 16 ಗಜ ಬಟ್ಟೆಗಳಾಗುವುವು. ಒಂದು ಮಣ ಹತ್ತಿಯನ್ನು ಐದು ಗುಂಟೆ ಜಮೀನಿನಲ್ಲಿ

ಬೆಳೆಯಬಹುದು.[3] ಇದರಿಂದ ನಮ್ಮ ರೈತರು ಸುಲಭವಾಗಿ ಹತ್ತಿ ಬೆಳೆದು, ರಾಟೆಯ ಸಹಾಯದಿಂದ ದಾರ ತೆಗೆಯ ಬಹುದು. ಇದಕ್ಕೇ ಮಹಾತ್ಮಾ ಗಾಂಧಿಯವರು ರಾಟೆ ಯನ್ನು ಇಂಡಿಯಾ ದೇಶದ ಬಡತನವನ್ನು ನಿವಾರಿಸುವ ಸುದರ್ಶನಚಕ್ರವೆಂದು ಹೇಳಿದರು. ಮದ್ರಾಸಿನ ಮುಖ್ಯ ಮಂತ್ರಿಗಳಾದ ಶ್ರೀ॥ ಸಿ. ರಾಜಗೋಪಾಲಾಚಾರ್ಯರು ರೈತನು ಚರಕದಲ್ಲಿ ದಿನ ಒಂದಕ್ಕೆ ಕನಿಷ್ಟ ಒಂದಾಣೆಯನ್ನಾ ದರೂ ಸಂಪಾದಿಸಬಹುದೆಂದು ತಿಳಿಸಿರುತ್ತಾರೆ. ನಮ್ಮ ರೈತನ ವರಮಾನ ವರ್ಷಕ್ಕೆ ಮೂವತ್ತು–ನಲವತ್ತು ರೂಪಾಯಿ ಗಳು. "ಬರಿಯ ಕೈಗೆ ಕಡೆಯೇ ಹಿತ್ತಾಳೆ ಕಡಗ" ಎಂಬಂತೆ ಚರಕದಿಂದ ಬರುವ ಉತ್ಪತ್ತಿಯಿಂದ ನಮ್ಮ ರೈತನಿಗೆ ಎಷ್ಟೋ ಉಪಯೋಗವಾಗುವುದು. ಕುರಿ ಕೋಳಿಗಳನ್ನು ಸಾಕುವುದು ನಮ್ಮ ರೈತರಲ್ಲಿ ಬಹಳ ಕಾಲದಿಂದಲೂ ರೂಢಿಯಲ್ಲಿದೆ. ಆದರೆ ಇವುಗಳನ್ನು ಸಾಕುವ ರೀತಿಯು ಚೆನ್ನಾಗಿಲ್ಲ. ಈಚೆಗೆ ಸರ್ಕಾರದವರು (White leg-horn, Rhode islands) ಮುಂತಾದ ಸೀಮೆಕೋಳಿಗಳನ್ನು ರೈತರಿಗೆ ಸುಲಭವಾಗಿ ಒದಗುವಂತೆ ಏರ್ಪಾಡು ಮಾಡಿರುತ್ತಾರೆ. ಸ್ವಲ್ಪ ಎಚ್ಚರಿಕೆ ಯಿಂದ ಇವನ್ನು ಕಾಪಾಡಿದರೆ ಒಂದು ಕೋಳಿ ವರ್ಷಕ್ಕೆ ಇನ್ನೂರು ಮೊಟ್ಟೆಗಳನ್ನು ಕೊಡುತ್ತದೆ. ಇದರಿಂದ ರೈತರ ವರಮಾನ ಹೆಚ್ಚುವುದೆಂದು ಬೇರೆ ಹೇಳಬೇಕಾಗಿಲ್ಲ. ಕುರಿ ಗಳ ತಳಿಯನ್ನು ಉತ್ತಮಗೊಳಿಸಿ ಉತ್ತಮವಾದ ಉಣ್ಣೆ ದೊರೆಯುವಂತೆ ಮಾಡಲು 'ಮೆರಿನೋ ಟಗರು' ಎಂಬ ಸೀಮೆಯ ಟಗರುಗಳನ್ನು ರೈತರಿಗೆ ಸುಲಭ ಬೆಲೆಗೆ ಒದಗಿಸು

---

[3] "ಗ್ರಾಮಾಭಿವೃದ್ಧಿ ಸಂಘ"ದ ಸಲಹೆ.

ತ್ತಿದ್ದಾರೆ. ಇದರಿಂದಲೂ ರೈತರು ಉಪಯೋಗ ಹೊಂದ ಬಹುದು. ಅನುಕೂಲವಿರುವ ಕಡೆಗಳಲ್ಲಿ ಜೇನುಹುಳ ಗಳನ್ನು ಸಾಕುವ ಕೈಗಾರಿಕೆಗೂ ಪ್ರೋತ್ಸಾಹಕೊಡುತ್ತಿದ್ದಾರೆ. ಗುಲ್ಕನ್‌ಮಾಡುವುದು, ಅತ್ತರ್‌ತಯಾರಿಕೆ, ಹಗ್ಗ ಚಾಪೆಯ ಕೆಲಸ, ಬತ್ತ ಕುಟ್ಟುವುದು, ಎಣ್ಣೆಯ ಗಾಣ, ಕಾಗದ ಮಾಡುವುದು ಮುಂತಾದ ಕಸಬುಗಳನ್ನು ಹಳ್ಳಿಗಳಲ್ಲಿ ಬಳಕೆಗೆ ತರಬಹುದು. ಕಾಗದದ ಕೈಗಾರಿಕೆಯು ನಮ್ಮ ದೇಶದಲ್ಲಿ ಪ್ರಚಾರದಲ್ಲಿದ್ದ ಒಂದು ಉತ್ತಮವಾದ ಕಸಬೆಂದು ಈಚೆಗೆ ತಿಳಿದುಬಂದಿದೆ.[4] ಹಳ್ಳಿಯವರು ಅನುಕೂಲವಿದ್ದರೂ ಕಾಲವನ್ನು ವ್ಯರ್ಥವಾಗಿ ಕಳೆಯುವರೇ ವಿನಾ ಮನೆ ಹಿತ್ತಲಲ್ಲಿ ಸೊಪ್ಪು, ತರಕಾರಿಗಳನ್ನು ಕೂಡ ಬೆಳೆಯುವುದನ್ನು ಬಿಟ್ಟಿರುತ್ತಾರೆ. ಹಳ್ಳಿಗಳಲ್ಲಿ ಏನಾದರೂ ವಿಶೇಷವಾದರೆ ಕಾಯಿಪಲ್ಯಗಳನ್ನು ಪಟ್ಟಣಗಳಿಂದ ತರಬೇಕಾದ ಶೋಚ ನೀಯ ಸ್ಥಿತಿ ಬಂದಿದೆ. ಇದಕ್ಕೆ ಹಳ್ಳಿಗರ ಆಲಸ್ಯವೇ ಕಾರಣ. ನಾನಾವಿಧವಾದ ತರಕಾರಿಗಳು, ಸೊಪ್ಪು ಮತ್ತು ಹಣ್ಣು, ಹೂವಿನ ಗಿಡಗಳು—ಇವುಗಳನ್ನು ರೈತರು ಬೆಳೆದು ಲಾಭ ಸಂಪಾದಿಸಬಹುದು. ಹಳ್ಳಿಗಳಲ್ಲಿ ನೀರು ನಿಂತು ರೊಚ್ಚಾ ಗುವ ಸ್ಥಳಗಳಲ್ಲಿ ಮಲ್ಲಿಗೆ ಅಂಟನ್ನೋ, ಬಾಳೆಯ ಗಿಡವನ್ನೊ ಹಾಕುವುದರಿಂದ ರೊಚ್ಚು ಕಡಿಮೆಯಾಗುವುದು. ಇದಕ್ಕೂ ಸಹ ನಮ್ಮ ಸರ್ಕಾರದವರು ಹಳ್ಳಿಯವರಿಗೆ ತರಕಾರಿ ಬೀಜ ಗಳು, ಕೆಲವು ಹಣ್ಣಿನ ಗಿಡಗಳನ್ನು ರಿಯಾಯಿತಿ ಬೆಲೆಗೆ ಪಂಚಾಯಿತಿಗಳಿಗೆ ಒದಗಿಸುವ ಏರ್ಪಾಡು ಮಾಡಿರುತ್ತಾರೆ. ಅಂತು ನಮ್ಮ ರೈತರು ಏನಾದರೊಂದು ಕಸಬನ್ನು ಇಟ್ಟು ಕೊಳ್ಳದೆ ಏಳಿಗೆ ಹೊಂದಲಾರರು.

---

[4] "Article in the Illustrated Weekly of India."

ರೈತರ ಏಳಿಗೆಗೆ ಇನ್ನೊಂದು ಮುಖ್ಯ ಸಾಧನವೆಂದರೆ ವ್ಯಾಪಾರ. ನಮ್ಮ ದೇಶವು ಬಹಳ ಹಿಂದಿನ ಕಾಲದಿಂದಲೂ ವ್ಯಾಪಾರಕ್ಕೆ ಪ್ರಸಿದ್ಧವಾಗಿತ್ತು. ಈಜಿಪ್ಟ್, ಗ್ರೀಸ್, ರೋಂ ಮುಂತಾದ ಪಾಶ್ಚಾತ್ಯ ದೇಶಗಳೊಡನೆ ರತ್ನಗಳು, ಮಸ್ಲಿನ್, ಮೆಣಸು ಮತ್ತು ಮಸಾಲೆ ಮುಂತಾದ ಬಹು ಬೆಲೆ ಬಾಳುವ ಪದಾರ್ಥಗಳಲ್ಲಿ ವ್ಯಾಪಾರ ಮಾಡುತ್ತಿದ್ದುದು ಇತಿಹಾಸ ಪ್ರಸಿದ್ಧವಾಗಿದೆ. ಈಗಲೂ ವಜ್ರಗಳ ತೂಕವನ್ನು ಕ್ಯಾರಟ್ ಗಳಿಂದ ನಿರ್ಣಯಿಸುವುದು ನಮ್ಮ ದೇಶದಲ್ಲಿ ವ್ಯಾಪಾರ ಮಾಡುತ್ತಿದ್ದ ಅರಬ್ಬರ ಕರೋಬಾಮಣಿಯಿಂದ ಎಂದರೆ ಯಾರಿಗಾದರೂ ಆಶ್ಚರ್ಯವಾಗುವುದು. ಹಿಂದಿನ ಕಾಲದಲ್ಲಿ ಪ್ರಯಾಣ ಸೌಕರ್ಯಗಳು ಇಲ್ಲದುದರಿಂದ ಹಳ್ಳಿಯ ಜನಗಳು ತಮಗೆ ಬೇಕಾದ ಪದಾರ್ಥಗಳನ್ನು ಸ್ವಪ್ರಯತ್ನ ಗಳಿಂದಲೇ ಒದಗಿಸಿಕೊಳ್ಳುತ್ತಿದ್ದರು. ಹೊರಗಿನ ಪದಾರ್ಥ ಗಳು ಬೇಕಾದರೆ ಸಾಟಿ (Barter) ವ್ಯಾಪಾರದಿಂದ ಕೊಳ್ಳು ತ್ತಿದ್ದರು. ಈಚೆಗೆ ಪ್ರಯಾಣ ಸೌಕರ್ಯಗಳು ಹೆಚ್ಚಿ ದಂತೆಲ್ಲಾ ಈ ಸ್ವಸಂಪೂರ್ಣತೆಯು ಮಾಯವಾಗಿ ಹಳ್ಳಿಯ ವರು ತಮಗೆ ಬೇಕಾಗುವ ಎಲ್ಲಾ ಪದಾರ್ಥಗಳನ್ನೂ ಪೇಟೆ ಯಿಂದಲೇ ತರಲು ಪ್ರಾರಂಭಮಾಡಿದ್ದಾರೆ. ಹಿಂದಿನ ಸಾಟಿ ವ್ಯಾಪಾರಕ್ಕೆ ಬದಲಾಗಿ ಹಣಕಾಸಿನ ಬಳಕೆ ಜಾಸ್ತಿಯಾಗಿದೆ. ರೈತರ ಆಶಯಗಳು ಹೆಚ್ಚಾಗಿ ಅವುಗಳನ್ನು ತೃಪ್ತಿಪಡಿಸಲು ತಾವು ಬೆಳೆದ ಪದಾರ್ಥವನ್ನು ದೂರದ ಪೇಟೆಗಳಲ್ಲಿ ಮಾರ ಬೇಕೆನ್ನುವ ಕುತೂಹಲವು ಬೆಳೆಯುತ್ತಿದೆ. ಈ ವ್ಯಾಪಾರವು ಕೇವಲ ರಾಷ್ಟ್ರೀಯವಾಗಿರದೆ ಅಂತರ್ರಾಷ್ಟ್ರೀಯವಾಗುತ್ತಿದೆ. 1933–34ನೇ ಇಸ್ವಿಯಲ್ಲಿ ಇಂಡಿಯಾ ದೇಶದಿಂದ ರಫ್ತಿ

ನಲ್ಲಿ (Export) ಸುಮಾರು ಮೂವತ್ತುನಾಲ್ಕು ಕೋಟಿ ರೂಪಾಯಿ ಬೆಲೆ ಬಾಳುವಷ್ಟು ಕಚ್ಚಾ ಪದಾರ್ಥಗಳೇ ಇದ್ದುವು. ಹೀಗೆ ವ್ಯಾಪಾರದಲ್ಲಿ ನಮ್ಮ ರೈತರ ಭಾಗವೇ ಜಾಸ್ತಿಯಾಗಿರುವುದರಿಂದ, ಅವರಿಗೆ ಹೆಚ್ಚಾದ ಲಾಭ ಬರುವಂತೆ ಮಾಡುವುದು ಸರ್ಕಾರದ ಕರ್ತವ್ಯ. ನಮ್ಮ ದೇಶದ ವ್ಯಾಪಾರಕ್ರಮದಲ್ಲಿ ರೈತರಿಗೆ ಅನೇಕ ಕೊರತೆಗಳಿವೆ. ರೈತರು ವ್ಯಾಪಾರದ ವಿಷಯದಲ್ಲಿ ಶಿಕ್ಷಿತರಲ್ಲ. ಇದರಿಂದ ಅವರು ದಳ್ಳಾಳಿಗಳ ಮೋಸಕ್ಕೆ ತುತ್ತಾಗುತ್ತಾರೆ. ರೈತರು ಕಷ್ಟಪಟ್ಟು ದುಡಿದರೂ ಅವರಿಗೆ ಬರಬೇಕಾದ ನ್ಯಾಯವಾದ ಲಾಭದ ಬಹು ಭಾಗವನ್ನು ಈ ದಳ್ಳಾಳಿಗಳೇ ಅಪಹರಿಸುತ್ತಾರೆ. ದಳ್ಳಾಳಿಗಳ ವರ್ತನೆಯನ್ನು ಸೂಚಿಸಲು ರಚಿಸಿದ್ದ ಒಂದು ಚಿತ್ರದಲ್ಲಿ ಹಸು ಸಾಕುವವನು ಮತ್ತು ಹಾಲು ಕೊಳ್ಳುವವನು ಸಣ್ಣಗಿದ್ದರೂ, ಹಾಲೊದಗಿಸುವ ದಳ್ಳಾಳಿಯು ಬೊಜ್ಜುಹೊಟ್ಟೆಯ ದಿಟ್ಟನಾಗಿದ್ದನು. ಅನೇಕ ಮಂದಿ ಸಾಹುಕಾರರು ರೈತರಿಗೆ ಮುಂಗಡವಾಗಿ ಸಾಲಕೊಟ್ಟು ದಿನಸಿಯನ್ನು ತಮ್ಮ ಮಂಡಿಗೇ ಹಾಕಬೇಕೆಂದು ನಿರ್ಬಂಧಪಡಿಸುವುದು ಸಾಮಾನ್ಯವಾಗಿದೆ. ಅಲ್ಲದೆ ರೈತನು ದಿನಸಿಯನ್ನು ಮಂಡಿಗೆ ತೆಗೆದುಕೊಂಡುಹೋದಾಗ ಸೋಡಿ, ರುಸುಂ, ದಳ್ಳಾಳಿ, ಪಡಿತರ, ಧರ್ಮ, ಮಜೂರಿ, ಕಮಿಷನ್ ಮುಂತಾದ ಸುಲಿಗೆಗಳಿಂದ ರೈತರನ್ನು ತೊಂದರೆಪಡಿಸುತ್ತಾರೆ. ಅಲ್ಲದೆ ಸಾಮಾನುಗಳನ್ನು ಅವುಗಳ ಯೋಗ್ಯತೆಗೆ ಅನುಸಾರವಾಗಿ ವಿಂಗಡಿಸದೆ ಎಲ್ಲಾ ಒಟ್ಟಿಗೆ ಸೇರಿಸಿ ಹರಾಜುಮಾಡುವ ಪದ್ಧತಿಯು ರೈತರ ನಷ್ಟಕ್ಕೆ ಕಾರಣವಾಗಿದೆ. ಅಲ್ಲದೆ ತೂಕ ಮತ್ತು ಅಳತೆಯಲ್ಲಿಯೂ

ಕೂಡ ಬಹು ಚಮತ್ಕಾರವಾದ ರೀತಿಯಲ್ಲಿ ಮೋಸಪಡಿಸು ತ್ತಾರೆ. ಸಾಧಾರಣವಾಗಿ ಮಾರಲು ಚಿಕ್ಕ ಅಳತೆ, ಕೊಳ್ಳಲು ದೊಡ್ಡ ಅಳತೆಗಳನ್ನು "ಚಿನ್ನಕ್ಕ, ಪೆದ್ದಕ್ಕ" ಎಂಬ ಸಂಕೇತಗಳಿಂದ ಉಪಯೋಗಿಸುವುದು ಸಾಧಾರಣ ವಾಗಿದೆ. ಅಂತೂ ನಾನಾ ರೀತಿಗಳಲ್ಲಿ ರೈತರು ಮೋಸ ಹೋಗುತ್ತಿದ್ದಾರೆ. ಇದನ್ನು ತಪ್ಪಿಸಲು ತೂಕ ಮತ್ತು ಅಳತೆಗಳ ಕಾನೂನು ಜಾರಿಮಾಡಿ, ಧಾರಣೆಗಳನ್ನು ನಿಶ್ಚೈ ಸಲು ಮಾರ್ಕೆಟಿಂಗ್ ಪಂಚಾಯಿತಿಗಳನ್ನು ನೇಮಿಸುವುದು ಅವಶ್ಯಕ. ನಮ್ಮ ದೇಶದಿಂದ ರಫ್ತಾಗುವ ಸಾಮಾನುಗಳ ವಿಷಯದಲ್ಲಿ ಜನರಿಗೆ ತಿಳುವಳಿಕೆ ಕೊಡಲು ಮಾರ್ಕೆಟಿಂಗ್ ಆಫೀಸರುಗಳನ್ನು ನೇಮಿಸುವುದು ಅವಶ್ಯಕ. ಮೈಸೂರು ಸರ್ಕಾರದವರು ನೇಮಿಸಿರುವ 'ಟ್ರೇಡ್ ಕಮಿಷನರ್' ಎಂಬ ಅಧಿಕಾರಿಗಳ ಸಹಾಯದಿಂದ ಮೈಸೂರಿನ ಪದಾರ್ಥಗಳಿಗೆ ಪರದೇಶಗಳಲ್ಲಿ ಗಿರಾಕಿ ಹೆಚ್ಚುವಂತೆ ಮಾಡಿರುವುದು ವಿಶೇಷ ಸಂಗತಿ. ಕೆಲವು ದಿನಗಳ ಹಿಂದೆ ನಡೆದ ಪ್ರದರ್ಶನದಲ್ಲಿ ಎಲಿಜ಼ಬೆತ್ ರಾಣಿಯುವರು ಮೈಸೂರಿನ ಸಾಮಾನುಗಳನ್ನು ಹೊಗಳಿ ಕೊಂಡುಕೊಂಡರೆಂದು ಕೇಳಿದರೆ ಯಾರುತಾನೆ ಕೊಂಡುಕೊಂಡರೆಂದು ಹೆಮ್ಮೆ ಪಡಲಾರರು? ರೈತರಿಗೆ ವ್ಯಾಪಾರದ ವಿಷಯದಲ್ಲಿ ಸಹಕಾರ ಸಂಘಗಳು ನೆರವಾಗ ಬಹುದು. ಜರ್ಮನಿ, ಇಟಲಿ, ಸ್ವಿಟ್ಸರ್ಲೆಂಡ್, ಐರ್ಲೆಂಡ್, ಡೆನ್ಮಾರ್ಕ್ ಮುಂತಾದ ದೇಶಗಳಲ್ಲಿ ಸಹಕಾರ ವ್ಯಾಪಾರ ಸಂಘಗಳು ರೈತರಿಗೆ ತುಂಬಾ ಉಪಕಾರಮಾಡಿವೆ. ಇವು ರೈತರಿಗೆ ಹೆಚ್ಚು ಲಾಭ ಬರುವಂತೆ ದಿನಸಿಯನ್ನು ಒಟ್ಟು ಗೂಡಿಸಲು ಸಹಾಯಮಾಡಬಹುದು. ಅಲ್ಲದೆ ಸಾಮಾನು

ಗಳನ್ನು ಯೋಗ್ಯತೆಗೆ ತಕ್ಕಂತೆ ವಿಂಗಡಿಸಿ (Grading) ಮಾರಬಹುದು. ರೈತರಿಗೆ ಮುಂಗಡವಾಗಿ ಹಣ ಒದಗಿಸಿ ವರ್ತಕರ ಬಲೆಯಿಂದ ತಪ್ಪಿಸಿ ಹೆಚ್ಚು ಲಾಭಪಡೆಯು ವಂತೆ ಮಾಡಬಹುದು. ಮೈಸೂರು ಸೀಮೆಯಲ್ಲಿಯೂ ಬೆಳೆಯುವ ಅಡಿಕೆ, ಕಾಫಿ, ಏಲಕ್ಕಿ, ರೇಷ್ಮೆ ಮುಂತಾದ ಪದಾರ್ಥಗಳನ್ನು ಈ ತರಹ ಸಂಘಗಳ ಮೂಲಕ ಮಾರಾಟ ಮಾಡಿ ಹೆಚ್ಚು ಲಾಭ ಹೊಂದಲು ಅವಕಾಶವಿದೆ. ಅಂತೂ ರೈತರ ವ್ಯಾಪಾರ ಸೌಕರ್ಯಗಳು ರೈತನ ಏಳಿಗೆಗೆ ಮುಖ್ಯ ಸೋಪಾನವೆಂದು ಹೇಳಬಹುದು.

## III. ಬಡತನ, ಸಾಲ, ಪರಿಹಾರ

ಹಿಂದಿನ ಎರಡು ಅಧ್ಯಾಯುಗಳಲ್ಲಿ ಹಳ್ಳಿಗಳ ಈಗಿನ ಹೀನ ಸ್ಥಿತಿಗೆ ಕಾರಣಗಳನ್ನೂ ಮತ್ತು ಹಳ್ಳಿಗಳ ಏಳಿಗೆಗೆ ಮುಖ್ಯ ವಾದ ವ್ಯವಸಾಯ ಉಪಕಸಬುಗಳು ಮತ್ತು ವ್ಯಾಪಾರ ಇವುಗಳಲ್ಲಿ ಆಗಬೇಕಾದ ಸುಧಾರಣೆಗಳನ್ನೂ ವಿಮರ್ಶೆ ಮಾಡಿದೆವು. ಈಗ ಹಳ್ಳಿಗಳಲ್ಲಿ ವಿಶೇಷವಾಗಿ ಕಂಡು ಬರುತ್ತಿರುವ ಬಡತನ ಮತ್ತು ಸಾಲಗಳ ವಿಷಯುಗಳನ್ನು ಸ್ವಲ್ಪಮಟ್ಟಿಗೆ ತಿಳಿದುಕೊಂಡು, ಅದಕ್ಕೆ ತಕ್ಕ ಪರಿಹಾರ ಮಾರ್ಗಗಳನ್ನು ಯೋಚಿಸಬೇಕಾಗಿದೆ. ನಮ್ಮ ಹಳ್ಳಿಗಳ ಬಡತನವು ಒಂದು ಭಯಂಕರವಾದ ಸಂಗತಿ. ಒಬ್ಬ ಕವಿಯು ವರ್ಣಿಸಿರುವಂತೆ ನಮ್ಮ ದೇಶದ ಜನಗಳು "ಬಡತನದ ಪಂಕದೊಳ್ ಪುಳುಗಳಂತುದಯಿಸುವರು, ಸಾಯುವರು." ಪುರಾತನ ಗ್ರಂಥಗಳಲ್ಲಿಯೂ ಮತ್ತು ಇತಿಹಾಸಗಳಲ್ಲಿಯೂ ನಮ್ಮ ದೇಶವು ಭಗವಂತನ ಮೆಚ್ಚಿನ

ನಾಡೆಂದೂ, ಸೃಷ್ಟಿಕರ್ತನು ಅನೇಕ ಅವತಾರಗಳನ್ನು ಮಾಡಿ ತನ್ನ ಲೀಲೆಗಳನ್ನು ತೋರಿಸಿರುವ ನಂದನವನವೆಂದೂ, ಚಿನ್ನದ ನಾಡೆಂದೂ, ರನ್ನದ ತೌರುಮನೆಯೆಂದೂ ವರ್ಣಿಸಲ್ಪಟ್ಟಿರುವುದನ್ನು ಓದಬಹುದಾಗಿದೆ. ಸಾಮಾನ್ಯ ದೃಷ್ಟಿಯಿಂದಲೂ ನಮ್ಮ ದೇಶದ ಹುಲುಸು, ಜಲ ತೃಣ ಕಾಷ್ಠಗಳ ಸಮೃದ್ಧಿಯೂ, ಜನಬಾಹುಳ್ಯವೂ, ಬೇಸಾಯ ಗಾರರ ಕುಶಲತೆಯೂ ಹೇರಳವಾಗಿದ್ದು ಪ್ರಪಂಚದಲ್ಲೆಲ್ಲಾ ಉತ್ತಮವಾದ ದೇಶವೆಂದು ಹೇಳಬೇಕಾಗುವುದು. ಆದರೆ ನಿಜಸ್ಥಿತಿಯು ಹಾಗಿಲ್ಲ. ನೆಮ್ಮದಿಯಿಂದ ಉಂಡು, ಉಟ್ಟು, ತೃಪ್ತರಾದ ಜನಗಳಿಗಿಂತ ಹೊಟ್ಟೆಗಿಲ್ಲದ ಭಿಕಾರಿಗಳೇ ವಿಶೇಷ ವಾಗಿ ಕಂಡುಬರುತ್ತಿದ್ದಾರೆ. ಬಡತನದ ಬೇಗೆಯಿಂದ ಬೆಂದು ಜನರು ನಿಸ್ತೇಜರಾಗಿದ್ದಾರೆ. ಎಲ್ಲೆಲ್ಲಿಯೂ ನಿರುದ್ಯೋಗವು ಜಾಸ್ತಿಯಾಗಿ ಕೇವಲ ಜೀವಧಾರಣೆಗೂ ಮಾರ್ಗವಿಲ್ಲದೆ, ಬಹು ತೊಂದರೆಪಡುತ್ತಿರುವವರ ಆರ್ತನಾದವೇ ಕೇಳಿ ಬರುತ್ತಿದೆ. ನಮ್ಮ ದೇಶದ ಬಡತನ "ಕೈಯೊಳಗಿನ ಹುಣ್ಣಿ ನಂತೆ." ಅದನ್ನು ತಿಳಿಯಲು ಬೇರೆ ಕನ್ನಡಿ ಬೇಕಾಗಿಲ್ಲ. ಸರ್ವಜ್ಞನು ಹೇಳಿರುವಂತೆ ನಮ್ಮ ರೈತರು ದುಡಿಯುವುದು ಕೇವಲ "ಚೋಟುದ್ದ ಹೊಟ್ಟೆಗೆ ಮತ್ತು ಗೇಣುದ್ದ ಬಟ್ಟೆಗೆ."

ಒಂದು ದೇಶದ ಐಶ್ವರ್ಯವನ್ನು ಅದೇ ದೇಶೀಯರ ಸರಾಸರಿ ವರಮಾನದಿಂದ ನಿರ್ಧರಿಸುವುದು ಸಾಮಾನ್ಯ ಪದ್ಧತಿ ಯಾಗಿದೆ. ಇದರಂತೆ ಪ್ರತಿಯೊಬ್ಬ ಭಾರತೀಯನ ವರಮಾನ ವನ್ನೂ ಇತರ ದೇಶೀಯರ ವರಮಾನದೊಂದಿಗೆ ಹೋಲಿಸಿ ನೋಡಿದರೆ ನಮ್ಮ ದೇಶದ ಆರ್ಥಿಕಸ್ಥಿತಿಯು ತಿಳಿಯುವುದು. ತಲೆಯೊಂದಕ್ಕೆ ಇಂಗ್ಲೆಂಡಿನಲ್ಲಿ 1,692, ಕೆನಡಾ 1,268,

ಯು.ಎಸ್.ಎ. 2053, ಫ್ರಾನ್ಸ್ 636 ರೂಪಾಯಿಗಳ ಸರಾಸರಿ ವರಮಾನವಿರುವಾಗ ನಮ್ಮ ದೇಶದ ಸರಾಸರಿ ವರಮಾನವು ಕೇವಲ 80 ರೂಪಾಯಿಗಳಿಗಿಂತ ಕಡಿಮೆಯೆಂದರೆ ನಮ್ಮ ದೇಶದ ಆರ್ಥಿಕಸ್ಥಿತಿಯು ಎಂತಹ ವಿಷಮಸ್ಥಿತಿಯಲ್ಲಿರುವುದೆಂದು ತಿಳಿಯಬರುವುದು. ಈ ಬಡತನದ ಫಲವಾಗಿ ನಮ್ಮ ರೈತರ ಜೀವನದ ಅಂತಸ್ತು ಕೂಡ (Standard of life) ಬಹಳ ಕೆಳಮಟ್ಟದಲ್ಲಿದೆ. 1931ನೇ ಮೈಸೂರು ಸೆನ್ಸಸ್ ವರದಿಯ ಪ್ರಕಾರ ನಮ್ಮ ರೈತರಲ್ಲಿ ಪ್ರತಿಯೊಬ್ಬನಿಗೂ ಕಡೇಪಕ್ಷ, ತಿಂಗಳಿಗೆ ನಾಲ್ಕು ರೂಪಾಯಿಗಳಾದರೂ ಜೀವನಕ್ಕೆ ಅವಶ್ಯಕವೆಂತಲೂ, ಆದರೆ ಅವರ ವರಮಾನವು ವರ್ಷಕ್ಕೆ ಮೂವತ್ತು ರೂಪಾಯಿಗಳಿಗಿಂತ ಹೆಚ್ಚಾಗಿಲ್ಲವೆಂತಲೂ ತಿಳಿದುಬರುತ್ತದೆ. ಮೈಸೂರು ದೇಶದ ಕೆಲವು ಹಳ್ಳಿಗಳಲ್ಲಿ ನಡೆಸಿದ ಪರಿಶೀಲನೆಯ ಪ್ರಕಾರ ತಲೆಯೊಂದಕ್ಕೆ ವರ್ಷಕ್ಕೆ 69 ರೂಪಾಯಿಗಳು ಖರ್ಚಾಗುವುದೆಂದೂ, ಆದರೆ ಅದೇ ಜೈಲಿನಲ್ಲಿರುವ ಖೈದಿಗೆ ಸರ್ಕಾರದವರು ವರ್ಷಕ್ಕೆ 130 ರೂಪಾಯಿಗಳನ್ನು ಖರ್ಚುಮಾಡುವರೆಂದೂ ಗೊತ್ತಾಗಿದೆ. ಇದರಿಂದ ನಮ್ಮ ರೈತನ ಜೀವನವು ಖೈದಿಯ ಜೀವನಕ್ಕಿಂತ ಹೀನಸ್ಥಿತಿಯಲ್ಲಿದೆ ಎಂದಮೇಲೆ, ಇನ್ನು ಬಡತನವನ್ನು ಬೇರೆ ವರ್ಣಿಸಬೇಕಾಗಿಲ್ಲ. ಈ ಬಡತನಕ್ಕೆ ಹಲವು ಕಾರಣಗಳುಂಟು. ನಮ್ಮ ದೇಶದ ಜನಸಂಖ್ಯೆಯು ವಿಶೇಷವಾಗಿ ಏರುತ್ತಿದೆ. 1931ನೇ ಇಂಡಿಯಾ ಸೆನ್ಸಸ್ ವರದಿಯಲ್ಲಿ ನಮ್ಮ ದೇಶದ ಜನಸಂಖ್ಯೆಯು 3,530 ಲಕ್ಷ ಎಂತಲೂ, ಕಳೆದ ಹತ್ತು ವರ್ಷಗಳಲ್ಲಿ (1921–1931ರ ವರಿವಿಗೆ) 340 ಲಕ್ಷ ಪ್ರಜೆ ಜಾಸ್ತಿಯಾಗಿರುತ್ತೆಂತಲೂ

ತಿಳಿದುಬರುತ್ತದೆ. ಇದರಿಂದ ಊಟಮಾಡುವವರು ಹೆಚ್ಚಾಗುತ್ತಿದ್ದರೂ ಸಂಪಾದನೆಯು ಮಾತ್ರ ಹೆಚ್ಚಾಗದೆ ಅನೇಕರು ಹೊಟ್ಟೆಗಿಲ್ಲದೆ ನರಳಬೇಕಾಗುವುದು. ಅಲ್ಲದೆ ಜನಗಳು ಒಂದೇ ಉದ್ಯೋಗವನ್ನು ನಂಬಿಕೊಂಡಿರುವುದರಿಂದ ಬೇರೆ ಸಂಪಾದನೆಗೆ ಮಾರ್ಗವಿಲ್ಲದೆ ತೊಂದರೆ ಪಡುತ್ತಿರುತ್ತಾರೆ. ನಮ್ಮ ದೇಶದಲ್ಲಿ ಶೇಕಡಾ 80ಕ್ಕಿಂತ ಜಾಸ್ತಿಯಾಗಿ ವ್ಯವಸಾಯವನ್ನೇ ನಂಬಿರುತ್ತಾರೆ. ಅವರ ಸ್ಥಿತಿಯು ಹಿಂದೆಯೇ ವರ್ಣಿಸಿರುವಂತೆ ಸ್ವಲ್ಪವೂ ತೃಪ್ತಿಕರವಾಗಿಲ್ಲ. ಇದಲ್ಲದೇ ನಮ್ಮ ಸಮಾಜದಲ್ಲಿರುವ ಜಾತಿಪದ್ಧತಿಗಳೂ, ಅವಿಭಕ್ತ ಕುಟುಂಬ (Joint-family), ಬಾಲ್ಯವಿವಾಹ, ಅಸ್ಪೃಶ್ಯತೆ— ಇವುಗಳೂ ಸಹ ನಮ್ಮ ಜನಗಳ ಬಡತನಕ್ಕೆ ಕಾರಣಗಳಾಗಿವೆ. ಅಲ್ಲದೇ ನಮ್ಮ ಜನಗಳಲ್ಲಿರುವ ಮೂಢನಂಬಿಕೆಯೂ ಅವರ ಬಡತನಕ್ಕೆ ಕಾರಣ. ಹಳ್ಳಿಯವರಲ್ಲಿ ಸಾಧಾರಣವಾಗಿ "ಹುಟ್ಟಿಸಿದ ದೇವರು ಹುಲ್ಲು ಮೇಯಿಸಿಯಾನೆ" ಎಂಬ ನಂಬಿಕೆಯು ಬೇರೂರಿ ನಿಂತಿದೆ. ಅಂತು ಕಾರಣಗಳು ಏನೇ ಇರಲಿ ಬಡತನವು ನಮ್ಮ ಜನಗಳ ಬೆನ್ನುಹತ್ತಿ ಬಂದಿರುವ ಭೇತಾಳವೆಂದು ನಿಸ್ಸಂಶಯವಾಗಿ ಹೇಳಬಹುದು.

**ಸಾಲ.**— ಹೀಗೆ ಬಡತನದಲ್ಲಿ ತೊಂದರೆಪಡುತ್ತಿರುವ ಜನರು ಯಾವ ಕೆಲಸ ಮಾಡಬೇಕಾದರೂ ಸಾಲವನ್ನು ಕೋರುವುದು ಬಹಳ ಸಹಜ. ರೈತರು ಸಾಲದಲ್ಲಿ ಹುಟ್ಟಿ, ಸಾಲದಲ್ಲಿ ಬೆಳೆದು, ಸಾಲದಲ್ಲಿಯೇ ಸಾಯುತ್ತಿರುವುದು ಸಾಧಾರಣವಾದ ವಿಷಯ. ನಮ್ಮ ದೇಶದಲ್ಲಿ ಸಾಲಕ್ಕೂ ಬಡತನಕ್ಕೂ ಒಂದು ವಿಶೇಷವಾದ ಸಂಬಂಧವಿದೆ. ಸಾಲದ

ಕಾರಣ ಬಡತನ. ಬಡತನದ ಫಲ ಸಾಲ. "ಹುಚ್ಚು ಬಿಟ್ಟು ಹೊರತು ಮದುವೆಯಾಗದು, ಮದುವೆಯಾದ ಹೊರತು ಹುಚ್ಚು ಬಿಡದು" ಎಂಬಂತೆ ಅದೊಂದು ವಿಷಮ ಚಕ್ರ. ನಮ್ಮ ದೇಶದ ರೈತರ ಸಾಲವನ್ನು ಸ್ಥೂಲವಾಗಿ ನಿರ್ಧರಿಸುವುದಕ್ಕಾಗಿ ಪ್ರಯತ್ನಗಳು ಬಹು ಕಾಲದಿಂದಲೂ ನಡೆದಿವೆ. 1875ರಲ್ಲಿ ಏರ್ಪಟ್ಟ ಡೆಕನ್ನಿನ ರೈತರ ಸಮಿತಿಯವರು ಜಮಿಾನಿರತಕ್ಕ ಹಿಡುವಳಿದಾರರಲ್ಲಿ ಸರಾಸರಿ ತಲೆಯೊಂದಕ್ಕೆ 371 ರೂಪಾಯಿಗಳು ಸಾಲವಿದೆ ಎಂದು ನಿರ್ಧರಿಸಿದರು. 1880 ಮತ್ತು 1901ರಲ್ಲಿ ನೇಮಿಸಲ್ಪಟ್ಟ ಕ್ಷಾಮ ಸಮಿತಿ (Famine commission) ಯವರು ರೈತರಲ್ಲಿ ಸುಮಾರು ಶೇಕಡಾ 75ರಷ್ಟು ಮಂದಿ ಸಾಲದಲ್ಲಿ ಮುಳುಗಿರುತ್ತಾರೆಂದು ಅಭಿಪ್ರಾಯಪಟ್ಟರು. ಫ್ರೆಡರಿಕ್ ನಿಕೋಲ್ಸನ್ (Frederick Nicholson), ಎಡ್ವರ್ಡ್ ಮ್ಯಾಕ್ಲಗನ್ (Edward Maclagghan) ಮತ್ತು ಡಾರ್ಲಿಂಗ್ (Darling) ಮುಂತಾದ ವಿದ್ವಾಂಸರ ನಿರ್ಣಯಗಳ ಆಧಾರಗಳಿಂದ ಬ್ರಿಟಿಷ್ ಇಂಡಿಯಾದ ಸಾಲ ಸುಮಾರು 600 ಕೋಟಿ ರೂಪಾಯಿಗಳೆಂದು ಗೊತ್ತಾಗಿತ್ತು. 1930ರಲ್ಲಿ ವಿಮರ್ಶೆ ನಡೆಸಿದ ಕೇಂದ್ರ ಬ್ಯಾಂಕಿಂಗ್ ಕಮಿಟಿ (Central Banking Committee)ಯವರ ಆಧಾರದಿಂದ ನಮ್ಮ ದೇಶದ ರೈತರ ಸಾಲವು 1,000 ಕೋಟಿ ರೂಪಾಯಿಗಳೆಂದು ನಿರ್ಧರಿಸಲ್ಪಟ್ಟಿದೆ. ಅವರು ಈ ಸಾಲದ ಕೋಟಲೆಯು ಹಿಮಾಲಯದಿಂದ ಕನ್ಯಾಕುಮಾರಿಯವರಿವಿಗೂ ಆವರಿಸಿರುವುದೆಂದು ಸಾರಿದರು. ನಮ್ಮ ಮೈಸೂರಿನಲ್ಲಿಯೂ ನಡೆಸಿರುವ ನಿರ್ಣಯಗಳ ಆಧಾರದಿಂದ ರೈತರ ಸಾಲವು 35 ಕೋಟಿ

ರೂಪಾಯಿಗಳಿಗಿಂತ ಮಿಗಿಲಾಗಿರುವುದೆಂದು ಗೊತ್ತಾಗುತ್ತದೆ.

ನಮ್ಮ ರೈತರ ಈ ಸಾಲದ ಹೊರೆಗೆ ಅನೇಕ ಕಾರಣಗಳಿವೆ. ವ್ಯವಸಾಯದ ಹೀನಸ್ಥಿತಿ, ಉಪಕಸಬುಗಳಿಲ್ಲದಿರುವುದು, ಜನಗಳು ಹೊಟ್ಟೆಗಿಲ್ಲದೆ ಅನೇಕ ವ್ಯಾಧಿಗಳಿಂದ ನರಳುತ್ತಿರುವುದು, ಕಾಲಕ್ಕೆ ಸರಿಯಾಗಿ ಮಳೆಬೆಳೆಗಳಾಗದಿರುವುದು, ವ್ಯವಸಾಯಕ್ಕೆ ಮುಖ್ಯವಾದ ದನಕರುಗಳು ಸರಿಯಾದ ಮೇವಿಲ್ಲದೆ ರೋಗಗಳಿಗೆ ತುತ್ತಾಗುವುದು, ರೈತನು ತನಗೆ ಬೇಕಾದ ಸಲಕರಣೆಗಳನ್ನೊದಗಿಸಿಕೊಳ್ಳಲು ಮೂಲಧನದ ಅಭಾವ, ಇವುಗಳ ಜೊತೆಗೆ ಪ್ರಬಲವಾದ ಕೆಲವು ಕಾರಣಗಳು ನಮ್ಮ ರೈತರನ್ನು ಸಾಹುಕಾರರ ಗುಲಾಮರನ್ನಾಗಿ ಮಾಡುತ್ತಿವೆ. ನಮ್ಮ ರೈತರು ಸಾಲವಾಗಿ ಪಡೆದ ಹಣವನ್ನು ಆದಾಯ ಬರುವ ಉಪಯೋಗವಾದ ರೀತಿಯಲ್ಲಿ ವಿನಿಯೋಗಿಸದೆ ವ್ಯರ್ಥವಾಗಿ ದುಂದುಖರ್ಚುಮಾಡುವರು. ಸಾಧಾರಣವಾಗಿ ರೈತರು ತಮ್ಮ ಸಂಸಾರಗಳಿಗೆ ಮಿತವಾಗಿ ಖರ್ಚುಮಾಡುತ್ತಿದ್ದರೂ, ಮದುವೆ, ಹಬ್ಬ ಮುಂತಾದ ಉತ್ಸವ ಸಮಯಗಳಲ್ಲಿಯೂ ಮತ್ತು ಸಾವು ಮುಂತಾದ ವಿಶೇಷ ಸಂದರ್ಭಗಳಲ್ಲಿಯೂ "ಹಾಸಿಗೆ ಇದ್ದಷ್ಟು ಕಾಲು ಚಾಚಬೇಕೆಂಬ" ನಿಯಮವನ್ನು ಮರೆತು ಯೋಗ್ಯತೆ ಮೀರಿ ಖರ್ಚುಮಾಡಲು ಯತ್ನಿಸುತ್ತಾರೆ. ಇದಕ್ಕೆ ನಮ್ಮ ಸಮಾಜದಲ್ಲಿ ಈ ವಿಶೇಷ ಸಂದರ್ಭಗಳಲ್ಲಿ ಹಣ ಖರ್ಚು ಮಾಡಿದಷ್ಟು ತಮಗೆ ಗೌರವ ದೊರೆಯುವುದೆಂಬ ತಪ್ಪುಭಾವನೆಯೇ ಕಾರಣ. ಸಮಾರಾಧನೆಯಲ್ಲಿ ಲಾಡು ಮಂಡಿಗೆಗಳನ್ನು ತಿಂದು ತೇಗುವ ನಂಟರಾರೂ ಸಾಲಗಾರನು ಹಣಕ್ಕೆ ತಗಾದೆ

ಮಾಡುವಾಗ ನೆರವಾಗುವುದಿಲ್ಲ. ಈ ಮುಂದುಗಾರಿಕೆಯ ಜೊತೆಗೆ ಮುಂದಾಲೋಚನೆಯ ಅಭಾವವು ರೈತರ ಹೀನ ಸ್ಥಿತಿಗೆ ಕಾರಣವಾಗಿದೆ. "ನಾಳೆ ಯಾರೋ ನಾವಾರೋ" ಎಂಬ ಭಾವನೆಯೂ ಅವರಲ್ಲಿ ಬೇರೂರಿ ಮುಂದಾಲೋಚನೆ ಯಿಲ್ಲದೆ ಹಣ ವ್ಯಯಮಾಡಿ ಸಾಲ ತೀರಿಸಲು ಮಾರ್ಗವಿಲ್ಲದೆ ತೊಂದರೆಪಡುತ್ತಿರುವರು. ಇದರ ಜೊತೆಗೆ ಕೋರ್ಟು ಕಚೇರಿ ವ್ಯವಹಾರ ಮಾಡುವುದರಲ್ಲಿ ರೈತರಿಗಿರುವ ವಿಶೇಷ ವಾದ ಮಮತೆಯೂ ಅವರ ಹೀನಸ್ಥಿತಿಗೆ ಕಾರಣವಾಗಿದೆ. ಯಾವುದೋ ಅಲ್ಪವಿಷಯಕ್ಕಾಗಿ ನೂರಾರು ರೂಪಾಯಿ ಗಳನ್ನು ವ್ಯರ್ಥವಾಗಿ ಖರ್ಚುಮಾಡುವರು. ರೈತರು ತಾವು ಹೊಟ್ಟೆಗೆ ತಿನ್ನದೆ, ಬಟ್ಟೆ ಉಡದೆ, ಹೆಂಡತಿ ಮಕ್ಕಳಿಗೆ ವಂಚನೆಮಾಡಿ ಕೂಡಿಟ್ಟ ತಮ್ಮ ದುಡಿಮೆಯನ್ನು ದೇವರಿಗರ್ಪಿಸುವ ಮುಡುಪಿನಂತೆ ವ್ಯವಹಾರಕ್ಕಾಗಿ ಒಪ್ಪಿಸುತ್ತಿರುವುದು ಬಹಳ ಶೋಚನೀಯವಾದ ವಿಷಯ. ಅವರು ರನ್ನನ ಗದಾಯುದ್ಧದಲ್ಲಿ "ನೆಲಕಿರಿವೆನೆಂದು ಬಗೆದಿರೇಂ ಛಲಕಿರಿವೇಂ" ಎಂದು ದುರ್ಯೋಧನನು ಹೇಳಿರುವಂತೆ ವ್ಯಾಜ್ಯ ಮಾಡುವುದು ಪ್ರಯೋಜನಕ್ಕಲ್ಲ; ಛಲಕ್ಕಾಗಿ. ಈ ಕೆಟ್ಟ ಚಾಳಿಯು ನಮ್ಮ ರೈತರಿಂದ ತೊಲಗಿದ ಹೊರತು ಅವರಿಗೆ ಏಳಿಗೆಯಿಲ್ಲ. ನಮ್ಮ ರೈತರ ಸಾಲಕ್ಕೆ ಪಿತ್ರಾರ್ಜಿತವಾದ ಸಾಲವು ಮುಖ್ಯವಾದ ಕಾರಣ ಗಳಲ್ಲೊಂದು. ಸಾಲವು ವಂಶಪಾರಂಪರ್ಯವಾಗಿ ಬರುವ ಆಸ್ತಿ. ತಂದೆಯ ಋಣವನ್ನು ತೀರಿಸುವುದು ಮಗನ ಪವಿತ್ರ ಕರ್ತವ್ಯವೆಂಬ ಭಾವನೆಯಿಂದ ತಮಗೆ ಸಂಬಂಧ ವಿಲ್ಲದ ಸಾಲದ ಸಂಕೋಲೆಗೆ ಸಿಕ್ಕಿ ನರಳುತ್ತಿರುತ್ತಾರೆ.

ಇದರಿಂದ ಸಾಹುಕಾರರು ಕುರಿಮರಿಯನ್ನು ಹೆದರಿಸಿದ ತೋಳನಂತೆ ರೈತರನ್ನು ಕೋಟಲೆಗೊಳಿಸುತ್ತಿರುವರು. ಬ್ರಿಟಿಷರ ಆಳಿಕೆಯಿಂದ ನಮ್ಮ ದೇಶದಲ್ಲಿ ನೆಲಸಿರುವ ಶಾಂತಿ ಯಿಂದ ದೊಡ್ಡ ಪಟ್ಟಣಗಳು, ರೈಲು, ಮೋಟಾರು ಮುಂತಾದ ಸೌಲಭ್ಯಗಳು ಅಭಿವೃದ್ಧಿಯಾಗಿ ಜಮಿನಿನ ಬೆಲೆಯು ಏರಿದ್ದುದರಿಂದ ರೈತರಿಗೆ ಕಷ್ಟವಿಲ್ಲದೆ ಸಾಲ ಸಿಕ್ಕಲು ಅವಕಾಶವಾಯ್ತು. ಇದರಿಂದ ದುಂದುಗಾರಿಕೆ ಹೆಚ್ಚಾಗಿ ರೈತರ ಜೀವನಕ್ರಮದಲ್ಲಿ ಅನೇಕ ಬದಲಾವಣೆಗಳು ಬಂದು ಹೆಚ್ಚುತ್ತಿರುವ ಖರ್ಚಿಗೆ ತಕ್ಕ ವರಮಾನವಿಲ್ಲದೆ ಸಾಲಗಾರರ ಬಲೆಗೆ ಬೀಳುತ್ತಿದ್ದಾರೆ.

ಲೇವಾದೇವಿಯು ಬಹು ಕಾಲದಿಂದ ನಮ್ಮ ದೇಶ ದಲ್ಲಿದ್ದರೂ ಸಾಹುಕಾರರು ಕೆಲವು ನಿರ್ಬಂಧಗಳನ್ನನುಸರಿಸ ಬೇಕಾಗಿತ್ತು. ದುಬಾರಿಬಡ್ಡಿ ಹಾಕುವುದು ಧರ್ಮವಿರುದ್ಧ ವೆಂದು ಭಾವಿಸಲ್ಪಟ್ಟು ಗ್ರಾಮಗಳಲ್ಲಿದ್ದ ಹಿರಿಯರು (ಪಂಚಾಯಿತರು) ವ್ಯವಹಾರಗಳನ್ನು ತೀರ್ಮಾನಮಾಡು ತ್ತಿದ್ದುದರಿಂದ, ಸಾಹುಕಾರರ ಸ್ವೇಚ್ಛಾಪ್ರವರ್ತನೆಗೆ ಅವಕಾಶವಿರುತ್ತಿರಲಿಲ್ಲ. ಬ್ರಿಟಿಷರ ಆಳ್ವಿಕೆ ಬಂದಮೇಲೆ ಹಳ್ಳಿಗಳ ಅಚ್ಚುಕಟ್ಟು ಸಡಲಿ ನ್ಯಾಯತೀರ್ಮಾನಕ್ಕೆ ಸಿವಿಲ್ ಕೋರ್ಟುಗಳು ಜಾಸ್ತಿಯಾದವು. ಅನೇಕ ಕಾನೂನುಗಳು ಬಳಕೆಗೆ ಬಂದುವು. ಹಳ್ಳಿಗಳ ವಿದ್ಯಮಾನಗಳನ್ನರಿಯದ ಅಧಿಕಾರಿಗಳು ಬರೀ ಕಾನೂನನ್ನೇ ಅನುಸರಿಸಿ ವ್ಯವಹಾರ ಗಳನ್ನು ತೀರ್ಮಾನಮಾಡುತ್ತಾ ಬಂದುದರಿಂದ ಸಾಹುಕಾರರಿಗೆ ನಿರಾತಂಕವಾಯಿತು. ಇದರಿಂದ ಸಾಹುಕಾರರು ರೈತರಿಂದ ಚಕ್ರಬಡ್ಡಿಯನ್ನು ವಸೂಲ್ಮಾಡಲು

ಹಿಂದೆಗೆಯದೆ ಅನೇಕ ಸಂದರ್ಭಗಳಲ್ಲಿ ಅವರ ಆಸ್ತಿಪಾಸ್ತಿ ಗಳನ್ನು ತಮ್ಮ ಬಾಕಿಗೆ ಈಡಾಗಿ ತೆಗೆದುಕೊಳ್ಳುವುದು ಬಹು ಸಾಧಾರಣವಾಗಿಹೋಯಿತು. ಸ್ವಾಭಾವಿಕವಾಗಿ ಜನರಲ್ಲಿರ ಬೇಕಾದ ದಯೆ ದಾಕ್ಷಿಣ್ಯಗಳು ಮಾಯವಾಗಿ ಹಣವೇ ಪ್ರಧಾನವೆಂಬ ಭಾವನೆಯು ಜನರಲ್ಲಿ ಮನೆಮಾಡಿಕೊಂಡಿದೆ. ಹೇಗಾದರೂ ಈಗಲೂ ರೈತರಿಗೆ ಸಾಹುಕಾರರೇ ಗತಿ. ಅವರೇ ರೈತರ ಕಾಮಧೇನು. ಕಷ್ಟಕಾಲದಲ್ಲಿ ಹಣ ಕೊಡುವುದಲ್ಲದೆ ಕ್ಷಾಮಕಾಲಗಳಲ್ಲಿ ಜೀವಧಾರಣೆಗಾದರೂ ದಿನಸಿಯನ್ನು ಕೊಟ್ಟು ಅವರನ್ನು ಕಾಪಾಡುತ್ತಾರೆ. ರೈತರ ಅವಿವೇಕವೆಂಬ ಮರುಭೂಮಿಯಲ್ಲಿ ಸಾಹುಕಾರನು ಒಂದು ಜಲಾಶಯವೆಂದು ಹೇಳಬಹುದು. ಈಚೆಗೆ ಪ್ರಪಂಚ ವನ್ನೇ ಆವರಿಸಿರುವ ಆರ್ಥಿಕ ಮುಗ್ಗಟ್ಟು ಸಹ ರೈತರನ್ನು ಬಹುಮಟ್ಟಿಗೆ ಕಂಗೆಡಿಸಿದೆ. ಅವರು ಬೆಳೆಯುವ ಪದಾರ್ಥ ಗಳ ಬೆಲೆಯು ಬಹಳ ಇಳಿದುಹೋಗಿರುವುದರಿಂದ, ತಾವು ಹಿಂದೆ ಮಾಡಿರುವ ಸಾಲವನ್ನು ತೀರಿಸಬೇಕಾದರೆ ಹೆಚ್ಚು ದವಸವನ್ನು ಕೊಡಬೇಕಾಗುವುದು. ಇದರಿಂದ ಅವರಿಗೆ ಸಾಲ ತೀರಿಸಲು ಮಾರ್ಗವೇ ಇಲ್ಲದಂತಾಗಿದೆ. ಮೇಲೆ ಹೇಳಿದ ಕಾರಣಗಳಿಂದ ರೈತರು ಸಾಲದ ಹೊರೆಯಲ್ಲಿ ಸಿಕ್ಕಿ ನರಳುತ್ತಿದ್ದಾರೆ. "ಸಾಲವೋ ಶೂಲವೊ" ಎಂಬಂತೆ ಸಾಲದ ಮಹಿಮೆಯನ್ನು ಸಾಲಮಾಡಿರುವವರೆಲ್ಲರೂ ಬಲ್ಲರು. ಸರ್ವಜ್ಞನು ಹೇಳಿರುವಂತೆ "ಸಾಲವನು ಕೊಂಬಾಗ ಮೇಲೋಗರುಂಡಂತೆ ಸಾಲಿಗರು ಬಂದು ಸೆಳೆವಾಗ ಕಿಬ್ಬದಿಯ ಕೀಲು ಮುರಿದಂತೆ ಸರ್ವಜ್ಞ" ಎಂಬ ಮಾತೇ ಸಾಕು.

ಹೀಗೆ ಪ್ರತಿದಿನವೂ ಹೆಚ್ಚುತ್ತಿರುವ ಸಾಲದ ಕೋಟಲೆ ಯಿಂದ ರೈತರನ್ನು ಕಾಪಾಡಬೇಕೆಂಬ ಉದ್ದೇಶದಿಂದ ಸರ್ಕಾರದವರು ಅನೇಕ ಪ್ರಯತ್ನಗಳನ್ನು ನಡೆಸಿರುವರು. ಅವುಗಳನ್ನು ವಿಮರ್ಶೆಮಾಡುವುದಕ್ಕೆ ಮೊದಲು ಒಂದು ಮುಖ್ಯವಾದ ವಿಷಯವನ್ನು ಗಮನಿಸಬೇಕಾಗಿರುವುದು. ಸಾಲಮಾಡಿ ಯಾವುದಾದರೂ ಆದಾಯ ಬರತಕ್ಕ ರೀತಿ ಯಲ್ಲಿ ವೆಚ್ಚಮಾಡಿದ್ದರೆ ಆ ಸಾಲವನ್ನು ತೀರಿಸುವುದರಲ್ಲಿ ಯಾವ ತೊಂದರೆಯೂ ಇರುವುದಿಲ್ಲ. ಅನಾವಶ್ಯಕವಾದ ದುಂದುಗಾರಿಕೆಗೆ ಮಾಡಿದ ಸಾಲವು ಜನರನ್ನು ಬೆಂಕಿಯಂತೆ ಸುಡುವುದು. ನಮ್ಮ ದೇಶದ ಸಾಲದಲ್ಲಿ ಹೆಚ್ಚು ಭಾಗವು ನಿರರ್ಥಕವಾದ ಸಾಲವಾಗಿರುವುದರಿಂದ ಬಹಳ ಆತಂಕಕ್ಕೆ ಕಾರಣವಾಗಿದೆ. ಜನರಲ್ಲಿ ಸಾಲಮಾಡುವ ಚಾಳಿಯು ತಪ್ಪ ಬೇಕಾದರೆ ಜ್ಞಾನಪ್ರಚಾರವಾಗಬೇಕು. ಈ ಉದ್ದೇಶದಿಂದ ಸರ್ಕಾರದವರು ಪ್ರೈಮರಿ ವಿದ್ಯಾಭ್ಯಾಸ ಹರಡಬೇಕೆಂದು ವಿಶೇಷ ಪ್ರಯತ್ನಮಾಡುತ್ತಿದ್ದರೂ ಅದು ಫಲಕಾರಿ ಯಾಗಿಲ್ಲ. ವಿದ್ಯಾಪ್ರಚಾರ ಪ್ರಯತ್ನಗಳು ಹೆಚ್ಚಾಗಿ ನಡೆಯಬೇಕು. ಇದರ ಜೊತೆಗೆ ಜನರಲ್ಲಿ ಮಿತವ್ಯಯ ಬುದ್ಧಿ ಯನ್ನು ಹೆಚ್ಚಿಸಿ ಕಷ್ಟಕಾಲಕ್ಕೆ ಸಹಾಯವಾಗುವಂತೆ ಸ್ವಲ್ಪ ಹಣವನ್ನು ಶೇಖರಿಸಲು ನೆರವಾಗುವ ಸೇವಿಂಗ್ಸ್ ಬ್ಯಾಂಕು ಗಳನ್ನು ಏರ್ಪಡಿಸಬೇಕು. ನಮ್ಮ ದೇಶದಲ್ಲಿ ಅನೇಕ ಖಾಸಗೀ ಸರ್ಕಾರೀ ಮತ್ತು ಪೋಸ್ಟಾಫೀಸು ಸೇವಿಂಗ್ಸ್ ಬ್ಯಾಂಕು ಗಳಿದ್ದರೂ ಅವು ತೀರಾ ಕಡಿಮೆ. ಈ ಬ್ಯಾಂಕುಗಳಲ್ಲಿ ಕೂಡಿಸಿದ ಹಣವನ್ನು ಆದಾಯ ಬರುವ ಕೈಗಾರಿಕೆ ಮುಂತಾದ ಉದ್ಯಮಗಳಲ್ಲಿ ಉಪಯೋಗಿಸಬೇಕು. ಈಗ

ಜಾರಿಯಲ್ಲಿರುವ ಸಿವಿಲ್ ಕಾನೂನುಗಳಿಂದ ಅನೇಕ ತೊಂದರೆ ಗಳಿವೆ. ರೈತನಿಗೆ ಅನ್ಯಾಯವಾಗಿ ಬಡ್ಡಿ ಹಾಕಿ ಆತನಿಂದ ಆಸ್ತಿಪಾಸ್ತಿಗಳನ್ನು ಕಸಿದುಕೊಳ್ಳಲು ಇರತಕ್ಕ ಅವಕಾಶವನ್ನು ತಪ್ಪಿಸಬೇಕು. ಈ ಉದ್ದೇಶದಿಂದ ಬ್ರಿಟಿಷ್ ಸರ್ಕಾರದವರು 1879ರಲ್ಲಿ "ಡೆಕನ್ ಅಗ್ರಿಕಲ್ಚರಿಸ್ಟ್ ರಿಲೀಫ್ ಆಕ್ಟು" ಎಂಬ ಕಾನೂನನ್ನು 1918ರಲ್ಲಿ "Usurious loans act" ಎಂಬ ಕಾನೂನನ್ನು ಜಾರಿಗೆ ತಂದರು. ಆದರೆ "ರಾಯಲ್ ಕಮಿಷನ್ ಆಫ್ ಅಗ್ರಿಕಲ್ಚರ್" ಎಂಬ ಸಮಿತಿಯವರು ತಿಳಿಸಿರುವಂತೆ ಅವುಗಳಿಂದ ಏನೂ ಉಪಯೋಗವಾಗಿಲ್ಲ. ಪಂಜಾಬ್ ಸರ್ಕಾರದವರು ಜಾರಿಮಾಡಿರುವ ಪಂಜಾಬ್ 'ಅಕೌಂಟ್ಸ್ ಬಿಲ್' ಎಂಬ ಮಸೂದೆಯ ಪ್ರಕಾರ ಎಲ್ಲಾ ಸಾಹುಕಾರರೂ ತಮ್ಮ ಲೆಕ್ಕಗಳನ್ನು ಸರಿಯಾದ ಪುಸ್ತಕಗಳಲ್ಲಿ ಬರೆಯಬೇಕೆಂದೂ, ಆರು ತಿಂಗಳಿಗೆ ಒಂದುಸಾರಿಯಾದರೂ ಸಾಲಗಾರರಿಗೆ ಅವರವರ ಸಾಲದ ಲೆಕ್ಕಾಚಾರವನ್ನು ತೋರಿ ಸುವ ರಶೀತಿಯನ್ನು ಕೊಡುವಂತೆ ಏರ್ಪಡಿಸಬೇಕೆಂದೂ ಮತ್ತು ಸಾಹುಕಾರರು ಲೈಸೆನ್ಸ್ ಪಡೆದಿರಬೇಕೆಂದೂ ವಿಧಾಯಕಮಾಡಿದ್ದಾರೆ. ಇಂಡಿಯಾ ಸರ್ಕಾರದ (Central Banking) ಸಮಿತಿಯವರು ಅಭಿಪ್ರಾಯಪಟ್ಟಿರುವಂತೆ ನಮ್ಮಲ್ಲಿ ಬೇರೂರಿರುವ ಸಾಲವೆಂಬ ವಿಷವೃಕ್ಷವನ್ನು ನಿರ್ಮೂಲಮಾಡುವುದು ಅವಶ್ಯಕವಾಗಿದೆ. ಇದಕ್ಕಾಗಿ ಸಾಹುಕಾರರಿಗೂ ಸಾಲಗಾರರಿಗೂ ರಾಜೀಮಾಡಿಸಿ (Debt conciliation) ಋಣವನ್ನು ಬಗೆಹರಿಸಲು ಅಧಿಕಾರಿಗಳು ಪ್ರಯತ್ನಪಡುವುದರಿಂದ ವಿಶೇಷ ಪ್ರಯೋಜನ ಉಂಟೆಂದು ಸೂಚಿಸಿರುತ್ತಾರೆ. ರೈತರ ವಿಷಮಸ್ಥಿತಿಯನ್ನು ಸಾಹುಕಾರರಿಗೆ

ತಿಳಿಸಿ, ಅವರ ದಯಾ ದಾಕ್ಷಿಣ್ಯಗಳನ್ನು ಸವಿಮಾತುಗಳಿಂದ ಜಾಗ್ರತೆಗೊಳಿಸಿ, ಸಾಲಗಾರರಿಗೆ ಸಹಾಯಮಾಡಬಹುದು. ಇದಕ್ಕಾಗಿ ಪ್ರತಿಯೊಂದು ಸರ್ಕಾರದವರೂ ಯೋಗ್ಯರೂ ಸುಶಿಕ್ಷಿತರೂ ವಾಕ್ಪಟುಗಳೂ ಆದ ಅಧಿಕಾರಿಗಳನ್ನ ಜನ ಗಳಲ್ಲಿ ಜ್ಞಾನಪ್ರಚಾರ ಕಾರ್ಯಕ್ಕೆ ನೇಮಿಸಬೇಕು. ಸಾಲದ ಮೊಬಲಗನ್ನು ನಿರ್ಧರಿಸಿ ಅದನ್ನು ಕಂತುಗಳಲ್ಲಿ ತೀರಿಸಲು ಅನುಕೂಲವಾಗುವಂತೆ ಮಾಡಬೇಕು. ಸಹಕಾರ ಸಂಸ್ಥೆಗಳು ರೈತರಿಗೆ ಬೇಕಾಗುವ ಹಣವನ್ನು ಸುಲಭ ರೀತಿಯಲ್ಲಿ ಒದಗಿ ಸಲು ಅವಕಾಶ ಮಾಡಿಕೊಡಬೇಕು. ಸಾಲ ರಿಯಾಯಿತಿ ಮಾಡಿಸುವ ಮಸೂದೆಗಳು ಮಧ್ಯಪ್ರಾಂತಗಳಲ್ಲಿಯೂ ಮತ್ತು ಮದ್ರಾಸಿನಲ್ಲಿಯೂ ಜಾರಿಯಲ್ಲಿವೆ. ಮದ್ರಾಸ್ ಸರ್ಕಾರದ ಮುಖ್ಯ ಮಂತ್ರಿಗಳಾದ ಶ್ರೀಯುತ ಸಿ. ರಾಜಗೋಪಾಲಾಚಾರ್ಯರು ಜಾರಿಗೆ ತಂದಿರುವ "Debt Relief Bill" ಎಂಬ ಮಸೂದೆಯು ಸ್ತೋತ್ರಾರ್ಹವಾಗಿದೆ. ಇದನ್ನನುಸರಿಸಿ ಇತರ ಕಾಂಗ್ರೆಸ್ ಸರ್ಕಾರಗಳೂ ಈ ತರಹ ಪ್ರಯತ್ನಗಳನ್ನು ಮಾಡುತ್ತಿರುವುದು ಸಂತೋಷದ ಸುದ್ದಿ. ಮೈಸೂರು ಸರ್ಕಾರದವರು "Agriculturist Relief Act" ಎಂಬ ಕಾನೂನನ್ನು ಜಾರಿ ಮಾಡಿರುವುದೂ' "Debt Conciliation Boards" ಎಂಬ ಸಾಲದ ರಿಯಾಯಿತಿ ಸಮಿತಿ ಗಳನ್ನು ಏರ್ಪಡಿಸಿರುವುದೂ ಹೆಮ್ಮೆಯ ವಿಷಯ. ಕೆಲವು ವರ್ಷಗಳಿಂದೀಚೆಗೆ ನಮ್ಮ ದೇಶದಲ್ಲಿ ಜಮೀನು ರೈತರಿಂದ ಸಾಹುಕಾರರ ಕೈಗೆ ಸೇರುತ್ತಿರುವುದು ಬಹಳ ವಿಷಾದಕರ ವಾದ ಸಂಗತಿ. ರೈತರು ಸಾಲದಲ್ಲಿ ಮುಳುಗಿ ತಮ್ಮ ಸರ್ವಸ್ವವನ್ನೂ ಸಾಹುಕಾರರ ಪಾಲುಮಾಡಿ ತಬ್ಬಲಿಗಳಾಗು

ವುದರಿಂದ ದೇಶದ ಆರ್ಥಿಕ ನೆಮ್ಮದಿಗೆ ಭಂಗವಾಗುತ್ತದೆ. ರೈತರು ದೇಶವೆಂಬ ಮನೆಗೆ ಕಂಬಗಳಿದ್ದಂತೆ. ಇದನ್ನು ತಪ್ಪಿಸಬೇಕೆಂದು ಪಂಜಾಬು ಸರ್ಕಾರದವರು "Land Alienation Act" ಎಂಬ ಮಸೂದೆಯ ಪ್ರಕಾರ ಸಾಹುಕಾರರು ಜಮಿಾನನ್ನು ರೈತರಿಂದ ಕೊಳ್ಳುವುದಕ್ಕಾಗಲೀ, ಅಥವಾ 30 ವರ್ಷಗಳಿಗೆ ಜಾಸ್ತಿ ಭೋಗ್ಯಮಾಡಿಕೊಳ್ಳುವುದಕ್ಕಾಗಲೀ ಅವಕಾಶವಿರುವುದಿಲ್ಲ. ಇದರಿಂದ ರೈತರನ್ನು ಸಾಹುಕಾರರ ಹಿಡಿಕೆಯಿಂದ ತಪ್ಪಿಸಿದರೂ ಸಾಹುಕಾರರಿಗೆ ಬದಲಾಗಿ ಅನುಕೂಲಸ್ಥರಾದ ರೈತರೇ ಬಡರೈತರನ್ನು "ದೊಡ್ಡ ಮಿಾನು ಸಣ್ಣ ಮಿಾನುಗಳನ್ನು ನುಂಗುವಂತೆ" ತೊಂದರೆ ಪಡಿಸಲು ಅವಕಾಶವಾಗುವುದು. ಇವುಗಳ ಜೊತೆಗೆ ಬಹು ಕಾಲದಿಂದ ಸರ್ಕಾರದವರು ತಕಾವಿ ಸಾಲವನ್ನು ಕೊಡುವ ಏರ್ಪಾಡು ಮಾಡಿರುತ್ತಾರೆ. ಇದರಿಂದ ರೈತರಿಗೆ ಉಪಯೋಗವಾಗಿದ್ದರೂ ಜನಸಾಮಾನ್ಯದಲ್ಲಿ ತಕಾವಿ ಸಾಲವೆಂದರೆ ಬೇಜಾರು ಕಂಡುಬರುತ್ತಿರುವುದು. ಇದಕ್ಕೆ ಸರ್ಕಾರದಲ್ಲಿ ಜನಗಳಿಗಿರುವ ಅನುಮಾನ. ಸಾಲ ವಸೂಲ್ಮಾಡುವುದರಲ್ಲಿ ಅಧಿಕಾರಿಗಳ ಕಾಠಿಣ್ಯ, ಸಾಲ ಮಂಜೂರ್ಮಾಡುವುದರಲ್ಲಿ ಅನಾವಶ್ಯಕವಾದ ಕಾಲವಿಳಂಬ, ಸಣ್ಣ ಅಧಿಕಾರಿಗಳ ಕಿರುಕುಳ ಮತ್ತು ಲಂಚಕೋರತನ— ಇವುಗಳು ಮುಖ್ಯ ಕಾರಣಗಳೆಂದು ಹೇಳಬಹುದು. ಅಲ್ಲದೆ ಸರ್ಕಾರದವರೊಬ್ಬರೇ ಎಷ್ಟೇ ಪ್ರಯತ್ನಪಟ್ಟರೂ ರೈತರಿಗೆ ಬೇಕಾಗುವ ಅನುಕೂಲಗಳನ್ನು ಒದಗಿಸುವುದೂ ಅಸಾಧ್ಯ. ತಕಾವಿ ಸಾಲವು "ಹೊಳೆಯಲ್ಲಿ ಹುಣಿಸೆಹಣ್ಣು ಕದರಿದಂತೆ" ಬಹು ಮಟ್ಟಿಗೆ ಫಲಕಾರಿಯಾಗಿಲ್ಲ.

ರೈತರಿಗೆ ನಿಜವಾಗಿಯೂ ಸಹಾಯವಮಾಡಿ ಅವರನ್ನ ಸಾಲದ ಹೊರೆಯಿಂದ ತಪ್ಪಿಸಬೇಕಾದರೆ ಸಹಕಾರ ಸಂಘಗಳು ಬಹುಮಟ್ಟಿಗೆ ನೆರವಾಗುವುವೆಂದು ಧಾರಾಳವಾಗಿ ಹೇಳಬಹುದು. "ಹೆಸರಿಲ್ಲದ ರೋಗಕ್ಕೆ ಹಿರೀಮದ್ದು" ಎಂಬಂತೆ ಪರಸ್ಪರ ಸಹಾಯ ಸಂಘಗಳು ರೈತರ ಕಷ್ಟಕ್ಕೆ ಸಂಜೀವಿನಿ ಎಂದು ಹೇಳಬಹುದು. ಸಹಕಾರ ತತ್ವವು ಅಮೋಘವಾದದ್ದು. ಅಲ್ಪಚೈತನ್ಯವುಳ್ಳ ರೈತರು ತಮ್ಮಲ್ಲಿರುವ ಸ್ವಲ್ಪ ಹಣವನ್ನು ಕೊಟ್ಟು ಸದಸ್ಯರಾಗಿ ಒಂದು ಸಂಘವನ್ನೇರ್ಪಡಿಸಿಕೊಂಡರೆ, 'ಸಂಘವೇ ಶಕ್ತಿ' ಎಂಬಂತೆ ತಮ್ಮ ಸ್ಥಿತಿಯನ್ನ ಉತ್ತಮಪಡಿಸಿಕೊಳ್ಳಲು ಅನುಕೂಲವಾಗುವುದು. "ಹನಿಗೂಡಿದರೆ ಹಳ್ಳ, ತೆನೆಗೂಡಿದರೆ ಭತ್ತ" ಎಂಬಂತೆ ರೈತರಿಂದ ಕೂಡಿಸಲ್ಪಟ್ಟ ಹಣದಿಂದ ಉಪಯೋಗವಾದ ಬಾಬುಗಳಿಗೆ ಸಾಲವನ್ನು ಸುಲಭ ರೀತಿಯಲ್ಲಿ ಕೊಟ್ಟು ರೈತರನ್ನು ಸಾಹುಕಾರರ ಬಲೆಗೆ ಬೀಳದಂತೆ ಮಾಡಬಹುದು. ಅಲ್ಲದೆ ರೈತರ ವ್ಯಾಪಾರವನ್ನು ಉತ್ತಮಪಡಿಸಿ ಹೆಚ್ಚು ಲಾಭ ಬರುವಂತೆ ಮಾಡುವುದಕ್ಕೂ, ಜಮೀನು ಹಂಚಿಕೆಯನ್ನು ತಪ್ಪಿಸಿ ಒಟ್ಟುಗೂಡಿಸುವುದಕ್ಕೂ, ಗ್ರಾಮಗಳಿಗೆ ಬೇಕಾಗುವ ವೈದ್ಯಸಹಾಯವನ್ನೊದಗಿಸುವುದಕ್ಕೂ, ಮಿತವ್ಯಯ ಬುದ್ಧಿಯನ್ನು ಹೆಚ್ಚಿಸಿ ಹಳ್ಳಿಗರ ಜೀವನದ ಅಂತಸ್ತನ್ನು ಉತ್ತಮಗೊಳಿಸುವುದಕ್ಕೂ ಮತ್ತು ವ್ಯಾಜ್ಯ ವ್ಯವಹಾರಗಳನ್ನು ಬಗೆಹರಿಸಿ ಶಾಂತಿಯನ್ನು ನೆಲೆಗೊಳಿಸುವುದಕ್ಕೂ ಸಹಕಾರ ಸಂಘಗಳು ಸಹಕಾರಿಯಾಗಬಹುದು. ಹೀಗಿದ್ದರೂ ನಮ್ಮ ದೇಶದಲ್ಲಿ ಸಹಕಾರ ಸಂಘಗಳು ತೃಪ್ತಿಕರವಾಗಿ ಕೆಲಸ ಮಾಡಿಲ್ಲ. ಮೈಸೂರು ದೇಶದಲ್ಲಿ 1934–35ರಲ್ಲಿ ಸುಮಾರು

.,999 ಸಂಘಗಳಿದ್ದುವು. ಇವುಗಳಲ್ಲಿ 1,36,377 ಸದಸ್ಯರಿದ್ದರು. ಇದನ್ನ ನಮ್ಮ ದೇಶದ ಜನಸಂಖ್ಯೆಗೆ ಹೋಲಿಸಿದರೆ ಸಹಕಾರದ ವಿಚಾರದಲ್ಲಿ ನಮ್ಮ ನಾಡು ಎಷ್ಟು ಹಿಂದುಳಿದಿದೆ ಎಂದು ಗೊತ್ತಾಗುವುದು. ಇನ್ನೊಂದು ವಿಷಯ, ನಮ್ಮ ರೈತರಮೇಲಿರುವ ಸಾಲದ ಹೊರೆಯನ್ನ ಸಾಮಾನ್ಯ ಪರಸ್ಪರ ಸಹಾಯ ಸಂಘಗಳು ಇಳಿಸಲಾರವು. ಅಲ್ಲದೆ ಸೊಸೈಟಿಗಳು ರೈತರಿಗೆ ಬೇಕಾಗುವ ದೀರ್ಘಾವಧಿ ಸಾಲಗಳನ್ನ ಒದಗಿಸಲಾರವು. ಆದುದರಿಂದಲೇ ಜಮಿನು ಅಡಮಾನದ ಬ್ಯಾಂಕುಗಳನ್ನು ಸ್ಥಾಪಿಸುವ ಅವಶ್ಯಕತೆಯು ಹೆಚ್ಚುತ್ತಿದೆ. ರೈತರ ಸಾಲದ ಹೊರೆಯನ್ನ ಇಳಿಸುವುದು, ಜಮೀನಿನ ಅಬಾದಿಗೆ ಬೇಕಾಗುವ ಸಾಲವನ್ನೊದಗಿಸುವುದು — ಈ ಬ್ಯಾಂಕುಗಳ ಉದ್ದೇಶ. ಈ ರೀತಿಯ ಬ್ಯಾಂಕುಗಳು ನಮ್ಮ ದೇಶದಲ್ಲಿ ಹೆಚ್ಚುತ್ತಿರುವುದು ಸಂತೋಷದ ವಿಷಯ. ನಮ್ಮ ಮೈಸೂರಿನಲ್ಲಿಯೂ ಒಂದು ಕೇಂದ್ರ ಅಡಮಾನದ ಬ್ಯಾಂಕನ್ನು ಸ್ಥಾಪಿಸಿ, ಅನೇಕ ತಾಲ್ಲೂಕುಗಳಲ್ಲಿ ಅದರ ಶಾಖೆಗಳನ್ನು ಏರ್ಪಡಿಸಿ ರೈತರಿಗೆ ಸಹಾಯಮಾಡುತ್ತಿರುವುದು ಎಲ್ಲರಿಗೂ ತಿಳಿದ ವಿಷಯ. ಆದರೆ ಈ ಪ್ರಯತ್ನ ಇನ್ನೂ ಹೆಚ್ಚಾಗಿ ನಡೆಯಬೇಕು. ಇದರ ಜೊತೆಗೆ ರೈತರಲ್ಲಿ ಜೀವವಿಮಾ ಪದ್ಧತಿ (Life Insurance) ಯನ್ನು ಬಳಕೆಗೆ ತರುವುದು ಉತ್ತಮ. ಆದರೆ ಪಾಲಿಸಿಯ ಹಣಗಳು ಸ್ವಲ್ಪವಾಗಿರಬೇಕು ಮತ್ತು ಲಲಿತವಾಗಿರಬೇಕು. ಸಹಕಾರ ಸಂಘಗಳು ಅಭಿವೃದ್ಧಿಯಾಗಬೇಕಾದರೆ ಮತ್ತು ರೈತರಿಗೆ ಅವುಗಳಿಂದ ನಿಜವಾಗಿಯೂ ಉಪಯೋಗವಾಗಬೇಕಾದರೆ, ಜನಗಳಲ್ಲಿ ತಿಳಿವಳಿಕೆ ಹೆಚ್ಚಾಗಬೇಕು. ಅನೇಕ ಹಳ್ಳಿಗಳಲ್ಲಿ ಪರಸ್ಪರ

ಸಹಾಯ ಸಂಘಗಳ ಲೆಕ್ಕಪತ್ರಗಳನ್ನು ಇಡಬಲ್ಲ ವಿದ್ಯಾವಂತರು ವಿರಳ. ಇದ್ದರೂ ನಿಸ್ಪೃಹತೆಯಿಂದ ಕೆಲಸ ಮಾಡುವವರು ಕಡಿಮೆ. ಸಂಘದ ಹಣವನ್ನ ಸ್ವಾರ್ಥಕ್ಕಾಗಿ ಉಪಯೋಗಿಸುವರೇ ಹೆಚ್ಚು. ಅಲ್ಲದೆ ರೈತರು ತಾವು ಪಡೆದ ಹಣವನ್ನು ಸಕಾಲಕ್ಕೆ ವಾವತಿಮಾಡಿದರೆ ತಮಗೇ ಒಳ್ಳೆಯ ದೆಂಬುದನ್ನು ಅರಿಯರು. ಇದನ್ನೆಲ್ಲಾ ನಿವಾರಿಸಲು ವಿದ್ಯಾ ಪ್ರಚಾರವೇ ರಾಜಮಾರ್ಗ. ಸಾಲಮಾಡುವುದರಿಂದ ತಮ್ಮ ಏಳಿಗೆಗೆ ಭಂಗಬರುವುದೆಂದು ಒಂದುವೇಳೆ ಸಾಲಮಾಡಿದರೂ ಹಣವನ್ನ ದುಂದುವೆಚ್ಚಮಾಡದೆ ಉಪಯೋಗವಾದ ರೀತಿ ಯಲ್ಲಿ ಖರ್ಚುಮಾಡುವುದರಿಂದ ಸಾಲವನ್ನು ಸುಲಭವಾಗಿ ತೀರಿಸಬಹುದೆಂದು ಮನದಟ್ಟಾಗಬೇಕು. ಒಟ್ಟನಲ್ಲಿ ತಮ್ಮ ಬಾಳಿನ ಉನ್ನತಿ ಅಥವಾ ಅವನತಿಯು ತಮ್ಮ ಕೈಯಲ್ಲೇ ಇರುವುದೆಂಬ ದೃಢವಾದ ನಂಬಿಕೆಯು ಅವರಲ್ಲಿ ಮೂಡ ಬೇಕು. ಇದೇ ಅವರ ಬಡತನದ ನಿವಾರಣೆಗೆ ಸರಿಯಾದ ಚಿಕಿತ್ಸೆ.

## IV. ವೈದ್ಯಸಹಾಯ, ವಿದ್ಯಾಭ್ಯಾಸ ಜನಜಾಗೃತಿ

ಇದುವರಿಗೂ ಗ್ರಾಮಾಂತರಗಳ ಹೀನಸ್ಥಿತಿಯನ್ನೂ ಅವುಗಳ ಏಳಿಗೆಗೆ ಬೇಕಾದ ಮಾರ್ಗಗಳನ್ನೂ ಕುರಿತು ಸ್ವಲ್ಪ ಮಟ್ಟಿಗೆ ವಿಮರ್ಶಿಸಿದೆವು. ಅಲ್ಲದೆ ರೈತರ ತಲೆಯಮೇಲೆ ದೊಡ್ಡ ಬೆಟ್ಟದಂತಿರುವ ಸಾಲದ ಹೊರೆಯನ್ನೂ, ಅದರ ಕಾರಣಗಳನ್ನೂ ಮತ್ತು ಅದನ್ನಿಳಿಸಲು ನೆರವಾಗಬಹುದಾದ ಕೆಲವು ಪರಿಹಾರಗಳನ್ನೂ ಯೋಚಿಸಿದೆವು. ಎಲ್ಲಕ್ಕಿಂತಲೂ ಮಿಗಿಲಾಗಿ ನಮ್ಮ ರೈತನ ಜೀವನಯಾತ್ರೆ ಸುಗಮವಾಗಿ

ನಡೆಯಬೇಕಾದರೆ ಅವನ ಶರೀರದಲ್ಲಿ ಸರಿಯಾದ ಬಲವಿರಬೇಕು. "The bed-rock foundation of all national strength and efficiency is physical" ಎಂದು ಹೇಳಿರುವಂತೆ ಒಂದು ಜನಾಂಗದ ಶಕ್ತಿಗೆ ಅದರ ಕಾಯಶಕ್ತಿಯೇ ತಳಹದಿಯಾಗಿರುತ್ತದೆ. ನಮ್ಮ ದೇಶದ ಜನಗಳ ಬಡತನವು ಎಂತಹ ಭೀಕರ ದೃಶ್ಯವೆಂಬುದನ್ನು ಹಿಂದೆಯೇ ನೋಡಿದೆವು. ಈ ಬಡತನಕ್ಕೆ ಪ್ರಬಲವಾದ ಕಾರಣ ಅನೇಕ ಜನಗಳು ಒಂದು ಹೊತ್ತು ಊಟಕ್ಕೆ ಕೂಡ ಮಾರ್ಗವಿಲ್ಲದೆ ನರಳುತ್ತಿರುವುದೆಂದು ಧಾರಾಳವಾಗಿ ಹೇಳಬಹುದು. "ಆರೋಗ್ಯವೇ ಭಾಗ್ಯ" ಎಂಬುದು ಬಹು ದೊಡ್ಡ ಮಾತು. ಐಶ್ವರ್ಯಕ್ಕಿಂತಲೂ ದೇಹಾರೋಗ್ಯವು ಉತ್ತಮವಾದ ಸಂಪತ್ತು. ಎಷ್ಟೇ ಐಶ್ವರ್ಯವಿದ್ದರೂ ಶರೀರದಲ್ಲಿ ನೆಮ್ಮದಿಯಿಲ್ಲದ ಜನಗಳಿಗೆ ಸುಖವಿಲ್ಲ. ವಿಶೇಷವಾಗಿ ನಮ್ಮ ಜನಗಳು ಬಡತನದಿಂದ ಹೊಟ್ಟೆಗಿಲ್ಲದೆ ಅನೇಕ ರೋಗರುಜಿನಗಳಿಂದ ನರಳುತ್ತಿರುತ್ತಾರೆ.

ಇಂಡಿಯಾ ದೇಶದ ವ್ಯವಸಾಯ ಸಮಿತಿಯವರು ನಮ್ಮ ದೇಶದ ಆರ್ಥಿಕ ಅಭಿವೃದ್ಧಿಗೂ ಜನಗಳ ಆರೋಗ್ಯಕ್ಕೂ ಬಹು ಸಮೀಪವಾದ ಸಂಬಂಧವಿರುವುದೆಂದು ಒತ್ತಿಹೇಳಿರುವರು. ಬಹುಕಾಲದಿಂದಲೂ ನಮ್ಮ ಜನಗಳು ಈ ಲೋಕದ ಸುಖಕ್ಕೆ ಗಮನಕೊಡುತ್ತಿರಲಿಲ್ಲವೆಂತಲೂ, ಯಾವಾಗಲೂ ಪರಲೋಕಸಂಬಂಧವಾದ ವಿಷಯಗಳಿಗೆ ಹೆಚ್ಚು ಪ್ರಾಶಸ್ತ್ಯ ಕೊಡುತ್ತಿದ್ದರೆಂದೂ ಹೇಳುವುದು ರೂಢಿಯಾಗಿದೆ. ಈ ಪ್ರಪಂಚವು ನಶ್ವರವೆಂದೂ ಎಲ್ಲವೂ ಮಾಯೆಯೆಂದೂ ಹೇಳುವ ಮಾತುಗಳನ್ನು ಈಗಲೂ ಕೇಳಬಹುದಾಗಿದೆ. ಆದರೆ ನಮ್ಮ ಇತಿಹಾಸವನ್ನೂ ವೇದಶಾಸ್ತ್ರಗಳನ್ನೂ

ವಿಮರ್ಶಿಸಿ ನೋಡಿದರೆ ನಮ್ಮ ಹಿಂದಿನವರು ತಮ್ಮ ದೇಹಾರೋಗ್ಯಕ್ಕೂ ಶಕ್ತಿ ಸಾಮರ್ಥ್ಯಗಳಿಗೂ ವಿಶೇಷ ಗಮನ • ಕೊಡುತ್ತಿದ್ದರೆಂದೂ, ಅವರು ಈ ವಿಷಯದಲ್ಲಿ ಪುರಾತನರಾದ ಗ್ರೀಕ್ ಮತ್ತು ರೋಮನ್ ಜನಗಳಿಗೆ ಹಿಂದುಳಿದಿರಲಿಲ್ಲವೆಂದೂ ಸ್ಪಷ್ಟವಾಗುವುದು. ಇದಕ್ಕೆ ನಮ್ಮಲ್ಲಿರುವ ಮಂತ್ರಗಳೇ ನಿದರ್ಶನಗಳಾಗಿವೆ. ಅಭಿಮನ್ಯು ಲವ ಕುಶ ಮುಂತಾದ ವೀರಯೋಧರು ನಮ್ಮ ದೇಶದಲ್ಲಿದ್ದರು. ಯಮನೊಡನೆ ಹೋರಾಡಿದ ಸಾವಿತ್ರಿಯು ನಮ್ಮ ದೇಶದಲ್ಲಿ ಇದ್ದಳೆಂದಮೇಲೆ ನಮ್ಮ ಪುರಾತನರು ಎಷ್ಟರ ಮಟ್ಟಿಗೆ ದೃಢ ಕಾಯರಾಗಿ, ಆಶಾವಾದಿಗಳಾಗಿ (Optimistic) ಮೃತ್ಯು ವನ್ನೂ ಎದುರಿಸಲು ಹಿಂಜರಿಯುತ್ತಿರಲಿಲ್ಲವೆಂಬುದು ಸ್ಪಷ್ಟ ವಾಗುವುದು ; ಅಲ್ಲದೆ ಮನುಷ್ಯನಿಗೆ ಬರಬಹುದಾದ ಅನೇಕ ವ್ಯಾಧಿಗಳನ್ನು ನಾಶಮಾಡುವ ವೈದ್ಯಶಾಸ್ತ್ರದಲ್ಲಿಯೂ ನಮ್ಮ ವರು ಇತರ ದೇಶದವರಿಗಿಂತ ನಿಪುಣರಾಗಿದ್ದರು. ಪ್ರಸಿದ್ಧ ರಾದ ಧನ್ವಂತರಿ, ಚರಕ, ಸುಶ್ರುತ ಮುಂತಾದ ಮಹರ್ಷಿ ಯರು ತಮ್ಮ ಅಮೋಘವಾದ ಆಯುರ್ವೇದ ವಿದ್ಯೆಯಿಂದ ಪ್ರಪಂಚವನ್ನೇ ಬೆರಗುಗೊಳಿಸಿದರು. ಆದರೆ ಇಂದಿನ ನಮ್ಮ ದೇಶದ ಜನಗಳ ಆರೋಗ್ಯಸ್ಥಿತಿಯೂ, ಆಯುಃ ಪರಿಮಿತಿಯೂ ತುಂಬಾ ಚಿಂತೆಗೆ ಕಾರಣವಾಗಿದೆ. ನಮ್ಮ ದೇಶದಲ್ಲಿ ಸರಾಸರಿ ಆಯುಃಪ್ರಮಾಣವು 23 ವರ್ಷಗಳೆಂದರೆ ಯಾರ ಮನಸ್ಸಾದರೂ ವ್ಯಥೆಯಿಂದ ಕುಗ್ಗುವುದು. ನಮ್ಮ ದೇಶದ ಹುಟ್ಟು ಸಾವುಗಳನ್ನು ಕೆಲವು ಇತರ ದೇಶಗಳೊಂದಿಗೆ ಹೋಲಿಸಿದರೆ ನಮ್ಮ ವಿಷಾದಕರವಾದ ಸ್ಥಿತಿಯು ಗೋಚರ ವಾಗುವುದು. ಪ್ರತಿ ಒಂದು ಸಾವಿರ ಜನಕ್ಕೆ ಒಂದು ವರ್ಷ

ವಲ್ಲಿ ಇಂಡಿಯಾ ದೇಶದಲ್ಲಿ 24·3, ಜಪಾನ್ 19·3, ಫ್ರಾನ್ಸ್ 16·8, ಇಂಗ್ಲೆಂಡ್ 12·3, ಜರ್ಮನಿ 11·8, ಆಸ್ಟ್ರೇಲಿಯಾ 9·3 ಜನಗಳು ಸಾಯುವರು. ಅದೇ ರೀತಿ ಪ್ರತಿ ಒಂದು ಸಾವಿರಕ್ಕೆ ಇಂಡಿಯಾ 33·3, ಆಸ್ಟ್ರೇಲಿಯಾ 21·0, ಜರ್ಮನಿ 18·4, ಫ್ರಾನ್ಸ್ 18·2, ಇಂಗ್ಲೆಂಡ್ 17·2, ಜನಗಳು ಹುಟ್ಟುವರು. ಇದರಿಂದ ಜನನ ಮರಣಗಳೆರಡ ರಲ್ಲಿಯೂ ನಮ್ಮ ದೇಶಕ್ಕೆ ಅಗ್ರಸ್ಥಾನವು ದೊರೆತಿರು ವುದೆಂದರೆ ಅತಿಶಯೋಕ್ತಿಯಲ್ಲ.

ಹೀಗೆ ಹುಟ್ಟು ಸಾವುಗಳಲ್ಲಿ ಹಿರಿಮೆಯನ್ನು ಪಡೆದಿದ್ದರೂ 1921ರಿಂದ 1931ರ ಒಳಗೆ (10 ವರ್ಷಗಳಲ್ಲಿ) ನಮ್ಮ ದೇಶದಲ್ಲಿ 340 ಲಕ್ಷ ಪ್ರಜೆಗಳು ಹೆಚ್ಚಾಗಿದ್ದಾರೆಂದು ತಿಳಿದರೆ, ಮುಂದೆ ನಮ್ಮ ದೇಶದ ಆರ್ಥಿಕ ಭವಿಷ್ಯದ ವಿಚಾರದಲ್ಲಿ ಭಯವು ತಲೆದೋರುವುದು. "ಜಾತಸ್ಯ ಮರಣಂ ಧ್ರುವಂ" ಎಂಬಂತೆ ಹುಟ್ಟಿದಮೇಲೆ ಸಾವೂ ನಿಶ್ಚಯ, ಸ್ವಾಭಾವಿಕಕಾರಣದಿಂದಾಗುವ ಸಾವನ್ನು ಯಾರೂ ತಪ್ಪಿಸಲಾರರು. ಆದರೆ ಕೆಟ್ಟ ಪದ್ಧತಿಗಳಿಂದಲೂ ಮತ್ತು ನಿವಾರಣೀಯವಾದ ರೋಗಗಳಿಂದಲೂ ಜನಗಳು ಹೆಚ್ಚಾಗಿ ಸಾಯುವುದರಿಂದ ದೇಶಕ್ಕೆ ತುಂಬಾ ಹಾನಿಯುಂಟು. 1922ರಲ್ಲಿ ಇಂಡಿಯಾ ದೇಶದಲ್ಲಿ 15,27,432 ಮಕ್ಕಳು ಒಂದು ವರ್ಷದೊಳಗಾಗಿ ಮೃತಪಟ್ಟರೆಂದರೆ ಯಾರಿಗಾದರೂ ಸಂಕಟವಾಗುವುದು. ಒಟ್ಟಿನಲ್ಲಿ 1922ರಲ್ಲಿ ಮರಣ ಹೊಂದಿದವರಲ್ಲಿ ಶೇಕಡಾ 48ರಷ್ಟು ಕೇವಲ ಹತ್ತು ವರ್ಷ ವಯಸ್ಸಿನೊಳಗಿನವರು. ಇದಕ್ಕೆ ಅನೇಕ ಕಾರಣಗಳುಂಟು. ಬಡತನದ ಫಲವಾಗಿ ಜನಗಳು ಸಂಕಟಕ್ಕೆ ಗುರಿಯಾಗಿ

ಹೊಟ್ಟೆಗಿಲ್ಲದೆ ದರಿದ್ರನಾರಾಯಣರಂತೆ ತೊಳಲುತ್ತಿರುವರು. ಮಕ್ಕಳ ಪೋಷಣೆಯಲ್ಲಿ ಜನಗಳಿಗಿರುವ ಅಜ್ಞಾನ, ಗಾಳಿ, ಬೆಳಕು—ಇವುಗಳಿಗೆ ಅವಕಾಶವಿಲ್ಲದ ಹೊಲಸಾದ ವಾಸಸ್ಥಳ, ಅಲ್ಲದೆ ನಮ್ಮ ಸಮಾಜದಲ್ಲಿರುವ ಬಾಲ್ಯವಿವಾಹ ಮುಂತಾದ ಪದ್ಧತಿಗಳು. ಮಕ್ಕಳ ಮರಣದಷ್ಟೇ ಘೋರವಾದ ಇನ್ನೊಂದು ವಿಷಯ ಹೆರಿಗೆಯಿಂದ ಆಗುವ ತಾಯಂದಿರ ಮರಣ. ನಮ್ಮ ದೇಶದಲ್ಲಿ ಬಾಲ್ಯವಿವಾಹದಿಂದ ಕೇವಲ ಎಳೆಯ ವಯಸ್ಸಿನಲ್ಲಿಯೇ ಮಕ್ಕಳನ್ನು ಹೆರುವುದು, ಬಾಣಂತಿಯರ ಪೋಷಣೆಗೆ ಸರಿಯಾದ ಗಮನ ಕೊಡದಿರುವುದು, ಅಲ್ಲದೆ ಹೆರಿಗೆಯ ಕಾಲದಲ್ಲಿ ಆವಶ್ಯಕವಾದ ವೈದ್ಯಸಹಾಯ ದೊರೆಯದೆ, ತಿಳುವಳಿಕೆಯಿಲ್ಲದ ಸೂಲಗಿತ್ತಿಯರಿಗೆ ಈ ಕೆಲಸವನ್ನು ವಹಿಸಿರುವುದು—ಈ ಮುಂತಾದ ಕಾರಣಗಳಿಂದ Sir John Maga ಎಂಬ ವಿದ್ವಾಂಸರು ಹೇಳಿರುವಂತೆ ನಮ್ಮ ದೇಶದಲ್ಲಿ ಸರಾಸರಿ ಚಿಕ್ಕ ವಯಸ್ಸಿನ ತಾಯಂದಿರಲ್ಲಿ 1,000ಕ್ಕೆ 100 ಜನ ಹೆರಿಗೆಯಲ್ಲೇ ಸಾಯುವರು. ಅಲ್ಲದೆ ನಮ್ಮ ದೇಶದಲ್ಲಿ ಒಟ್ಟು ಸುಮಾರು ಎರಡು ಲಕ್ಷ ತಾಯಂದಿರು ವರ್ಷವರ್ಷವೂ ಸಾಯುತ್ತಿರುವರು. ಇವುಗಳ ಜೊತೆಗೆ ಅನೇಕ ರೋಗಗಳಿಂದ ನಮ್ಮ ಜನಗಳು ವಿಶೇಷವಾಗಿ ಸಾಯುತ್ತಿರುವರು. ಈ ರೋಗರುಜಿನಗಳಿಂದ ದೇಶಕ್ಕೆ ಅಪಾರವಾದ ನಷ್ಟವಾಗುವುದು. ಜನಗಳು ಸಾಯುವುದು ದೊಡ್ಡ ನಷ್ಟ. ಇದಕ್ಕಿಂತ ಹೆಚ್ಚಾಗಿ ರೋಗದಿಂದ ನರಳುತ್ತಿರುವ ಜನಗಳು ಎಂದಿಗೂ ಉತ್ಸಾಹಶಾಲಿಗಳಾಗಿರಲು ಸಾಧ್ಯವಿಲ್ಲ. ನಮ್ಮ ಜನಗಳು ಮಲೇರಿಯಾ, ಕೊಕ್ಕೆಹುಳದ ರೋಗ, ಕ್ಷಯ ಮುಂತಾದ ರೋಗಗಳಿಂದ ನರಳುತ್ತಾ ಕೇವಲ ಜೀವಚ್ಛವಗಳಂತೆ,

ದಿನಗಳನ್ನು ಕಳೆಯುತ್ತಿರುವರು. ಈ ರೋಗಗಳಿಗೆ ಹಲವು ಕಾರಣಗಳಿವೆ. ಮೊದಲನೆಯದು ವಾಯುಗುಣ. ನಮ್ಮ ದೇಶವು ಉಷ್ಣವಲಯದಲ್ಲಿರುವುದರಿಂದ ಸ್ವಾಭಾವಿಕವಾಗಿ ಜನಗಳ ಬಲವನ್ನು ಬಹು ಮಟ್ಟಿಗೆ ಕುಗ್ಗಿಸುವುದು. ಇದರಿಂದ ಶೀತದೇಶಗಳಲ್ಲಿರುವ ಜನಗಳಂತೆ ನಮ್ಮವರು ಕಷ್ಟಪಟ್ಟು ದುಡಿಯಲಾರರು. ಅಲ್ಲದೆ ನಮ್ಮ ರೈತರಲ್ಲಿ ಬಹು ಮಂದಿಗೆ ದೇಹದ ಪೋಷಣೆಗೂ, ಶಕ್ತಿಗೂ ಅವಶ್ಯಕವಾಗಿ ಬೇಕಾಗು ವಷ್ಟು ಆಹಾರವು ದೊರೆಯುತ್ತಿಲ್ಲ. ಜನರ ಆರೋಗ್ಯಕ್ಕೂ ಅವರು ತೆಗೆದುಕೊಳ್ಳುತ್ತಿರುವ ಆಹಾರಕ್ಕೂ ನಿಕಟವಾದ ಸಂಬಂಧವಿದೆಯೆಂದು ವೈಜ್ಞಾನಿಕರು ಅನೇಕ ಪ್ರಯೋಗ ಗಳಿಂದ ನಿರ್ಧರಿಸಿರುತ್ತಾರೆ. "League of Nations," ಆರೋಗ್ಯ ಶಾಖೆಯವರು ಈ ವಿಷಯದಲ್ಲಿ ಅನೇಕ ಪ್ರಯೋಗ ಗಳನ್ನು ನಡೆಸಿರುತ್ತಾರೆ. ಅಲ್ಲದೆ ನಮ್ಮ ದೇಶದಲ್ಲಿಯೇ Sir Robert Macharrison (ಮೆಕ್ಯಾರಿಸನ್) ಮತ್ತು Dr. Acroid (ಆಕ್ರಾಯಿಡ್) ಮುಂತಾದ ಮಹನೀಯರು ಅನೇಕ ಪ್ರಯೋಗಗಳನ್ನು ನಡೆಸಿ, ಜನಗಳ ರೋಗರುಜಿನ ಗಳಿಗೆ ಸರಿಯಾದ ಆಹಾರದ ಅಭಾವವೇ ಕಾರಣವೆಂದು ಸಾರಿಹೇಳಿರುತ್ತಾರೆ. ಮೊದಲನೆಯದಾಗಿ, ನಮ್ಮ ದೇಶದಲ್ಲಿ ಜನಸಂಖ್ಯೆಯು ವಿಶೇಷವಾಗಿ ಹೆಚ್ಚಿ, ಸಂಪಾದನೆಯು ಹೆಚ್ಚ ದಿರುವುದರಿಂದ ಅನೇಕರು ಉಪವಾಸಮಾಡಬೇಕಾಗುವುದು. ಇದರ ಜೊತೆಗೆ ಜನಗಳು ತೆಗೆದುಕೊಳ್ಳುತ್ತಿರುವ ಆಹಾರ ದಲ್ಲಿಯೂ ದೇಹಪೋಷಣೆಗೆ ಅವಶ್ಯಕವಾದ ಪದಾರ್ಥಗಳು ಸರಿಯಾಗಿ ಸಿಕ್ಕುತ್ತಿಲ್ಲ. ಹಾಲು, ಮೊಸರು, ಬೆಣ್ಣೆ, ತರಕಾರಿ, ಹಣ್ಣುಗಳು, ಮಾಂಸ, ಮೊಟ್ಟೆ — ಇವುಗಳು ದೇಹದ ಬೆಳೆ

ವಣಿಗೆಗೆ ಅವಶ್ಯಕವಾದ ಪದಾರ್ಥಗಳನ್ನು ಹೊಂದಿವೆ. ಆದರೆ ನಮ್ಮ ದೇಶದಲ್ಲಿ ಅನೇಕ ಜನಗಳಿಗೆ ಇವುಗಳು ದೊರೆಯು ತ್ತಿಲ್ಲವೆಂಬುದನ್ನು ಎಲ್ಲರೂ ಬಲ್ಲರು. "ಹೊಟ್ಟೆತುಂಬಾ ಹಿಟ್ಟು, ಬಾಯಿತುಂಬಾ ಅನ್ನ" ಎನ್ನುವಂತೆ ಬರಿಹಿಟ್ಟು ಮತ್ತು ಸ್ವಲ್ಪ ಖಾರ ಇಷ್ಟು ಮಾತ್ರ ನಮ್ಮ ದೇಶದ (ಮೈಸೂರಿನ) ಜನಗಳ ಆಹಾರವಾಗಿರುತ್ತದೆ. ಅನೇಕ ಗ್ರಾಮಗಳಲ್ಲಿ ಸಮಯದಲ್ಲಿ ಸ್ವಲ್ಪ ಹಾಲು ಕೂಡ ದೊರೆಯು ವುದು .ಕಷ್ಟವಾಗುತ್ತದೆ. ಜೊತೆಗೆ ಸೊಪ್ಪು, ಕಾಯಿಪಲ್ಯಗಳ ವಿಷಯವಂತೂ ಹೇಳಬೇಕಾಗಿಲ್ಲ. ಜನಗಳು ಸೋಮಾರಿ ಗಳಾಗಿ ಅನುಕೂಲವಿದ್ದರೂ ಕೂಡ ಕಾಯಿಪಲ್ಯಗಳನ್ನು ಬೆಳೆಯದೆ ಸಮಯಬಿದ್ದಾಗ ಪೇಟೆಯಿಂದಲೆ ಅವುಗಳನ್ನು ತರುತ್ತಿರುವುದು ಶೋಚನೀಯವಾದ ಸಂಗತಿ. ಹಾಲು, ಮೊಸರು, ತರ್ಕಾರಿಗಳ ಅಭಾವದಿಂದ ದೇಹಪೋಷಣೆಗೆ ಅವಶ್ಯಕವಾದ ಸತ್ವ (Vitamins) ದೊರೆಯದೆ ಜನಗಳು ನಿರ್ಬಲರಾಗಿ ರೋಗಗಳಿಗೆ ತುತ್ತಾಗುತ್ತಿರುವರು. ಅಲ್ಲದೆ ಪದಾ ಪದ್ಧತಿ, ಅಸ್ಪೃಶ್ಯತೆ— ಇವುಗಳಿಂದಲೂ ಅನೇಕ ಜನಗಳಿಗೆ ಸರಿಯಾದ ನೀರು, ಗಾಳಿ, ಬೆಳಕುಗಳು ದೊರೆಯದೆ ನಿರ್ಬಲರೂ ವ್ಯಾಧಿಗ್ರಸ್ತರೂ ಆಗಿ ಸಂಕಟಪಡುತ್ತಿರುತ್ತಾರೆ. ಅಲ್ಲದೆ ಆರೋಗ್ಯಕ್ಕೆ ತೌರುಮನೆಗಳಾಗಿದ್ದ ನಮ್ಮ ಹಳ್ಳಿಗಳು ಇಂದು ಮಲಿನಕೂಪಗಳಾಗಿವೆ. 1918ರಲ್ಲಿ ನಮ್ಮ ದೇಶ ದಲ್ಲೆಲ್ಲಾ ಹಾವಳಿ ನಡೆಸಿದ ಇನ್‌ಫ್ಲೂಯೆಂಜಾ ಖಾಯಿಲೆ ಯಿಂದ ಸತ್ತವರಲ್ಲಿ ಶೇಕಡಾ 50ಕ್ಕಿಂತ ಹೆಚ್ಚಾಗಿ ನಮ್ಮ ರೈತರು. ಹಳ್ಳಿಗಳಲ್ಲಿ ಎಲ್ಲೆಲ್ಲಿಯೂ ತಿಪ್ಪೆಗುಂಡಿಗಳು, ನಾರು ತ್ತಿರುವ ಚರಂಡಿಗಳು, ಬಚ್ಚಲುಗಳು, ಕಸದ ಗುಡ್ಡೆಗಳು

ಮತ್ತು ಹೇಸಿಗೆಯ ದುರ್ಗಂಧದಿಂದ ನಮ್ಮ ಗ್ರಾಮಗಳು ನರಕಗಳಾಗಿವೆ. ಇದರಿಂದ ನಮ್ಮ ಜನಗಳು ಅನೇಕ ಪ್ರಬಲ ವಾದ ರೋಗಗಳಿಗೆ ತುತ್ತಾಗುತ್ತಿರುವರು. ಇವುಗಳಲ್ಲಿ ಮುಖ್ಯವಾದುದು ಕೊಕ್ಕೆಹುಳದ ರೋಗ. ಈ ರೋಗದ ಕ್ರಿಮಿಗಳು ರೋಗಗ್ರಸ್ತರ ಹೇಸಿಗೆಯಲ್ಲಿ ಮೊಟ್ಟೆಹಾಕಿ ಕಾಯುತ್ತಿರುವುವು. ನಮ್ಮ ಜನಗಳಲ್ಲಿ ಅನೇಕರು ಬರಿಯ ಕಾಲಿನಲ್ಲಿ ತಿರುಗುತ್ತಿರುವರು. ಇದರಿಂದ ಅಂಗಾಲುಗಳ ಮೂಲಕ ಈ ಕ್ರಿಮಿಗಳು ಜನಗಳ ಶರೀರವನ್ನು ಹೊಕ್ಕು ಅವರನ್ನು ವ್ಯಾಧಿಗ್ರಸ್ತರನ್ನಾಗಿ ಮಾಡುವುವು. ಇದರ ಜೊತೆಗೆ ಕಾಲರಾ ಜಾಡ್ಯವು ನಮ್ಮ ದೇಶದಲ್ಲಿ ವಿಶೇಷವಾದ ಹಾವಳಿ ಮಾಡುತ್ತಿರುವುದು. ಇವಕ್ಕೆ ಪ್ರಬಲವಾದ ಕಾರಣ ಕೊಳಕು ನೀರು. ನಮ್ಮ ಗ್ರಾಮಗಳಲ್ಲಿ ಕೆರೆಯೋ, ಕಟ್ಟೆಯೋ, ತೊರೆಯೋ ಇದ್ದರೆ ಅದರ ನೀರನ್ನೇ ಎಲ್ಲಾ ಕೆಲಸಗಳಿಗೂ ಉಪಯೋಗಿಸುವರು. ದನಗಳನ್ನು ತೊಳೆಯುವುದು, ಬಟ್ಟೆ ಗಳನ್ನೊಗೆಯುವುದು, ಸ್ನಾನಮಾಡುವುದು, ಮಲವಿಸರ್ಜನೆ ಮಾಡುವುದು, ಮಡಿನೀರು ತೆಗೆದುಕೊಂಡುಹೋಗುವುದು —ಎಲ್ಲಾ ಒಂದೇ ಕಡೆ ನಡೆಯಬೇಕಾಗಿರುವುದು. ಅದೇ ನೀರನ್ನೇ ಕುಡಿಯಲೂ ಉಪಯೋಗಿಸುವರು. ಮಲೇರಿಯಾ ವ್ಯಾಧಿಯು ನಮ್ಮ ದೇಶದಲ್ಲಿರುವ ಒಂದು ಭಯಂಕರವಾದ ರೋಗ. ಈ ವ್ಯಾಧಿಯ ಹರಡುವಿಕೆಗೆ ಹಳ್ಳಿಗಳ ಕೊಳಕೇ ಮುಖ್ಯ ಕಾರಣ. ಹಳ್ಳಿಗಳಲ್ಲಿ ಬೀದಿಗಳೆಲ್ಲಾ ಚರಂಡಿಗಳೇ. ಇದರಿಂದ ಅಲ್ಲಲ್ಲೇ ಕೊಳಕುನೀರು ನಿಂತು ಸೊಳ್ಳೆಗಳು ಜಾಸ್ತಿಯಾಗಿ, ಈ ವ್ಯಾಧಿಯು ವಿಶೇಷವಾಗಿ ಹರಡುತ್ತಿರು ವುದು. ಇವುಗಳಲ್ಲದೆ ಅನೇಕ ವಿಧವಾದ ಶ್ವಾಸಕೋಶಕ್ಕೆ

ಸಂಬಂಧಪಟ್ಟ ರೋಗಗಳೂ ನಮ್ಮ ರೈತರನ್ನು ಕೋಟಲೆಗೊಳಿಸುತ್ತಿವೆ. ಇವುಗಳಲ್ಲಿ ಬಹು ಮುಖ್ಯವಾದುವು ಇನ್‌ಫ್ಲೂಯೆಂಜಾ ಮತ್ತು ಕ್ಷಯ. ವರ್ಷ ವರ್ಷವೂ ಅನೇಕ ಹಳ್ಳಿಗಳಲ್ಲಿ ತಪ್ಪದೆ ಪ್ಲೇಗ್ ವ್ಯಾಧಿಯು ಬರುತ್ತಿರುವುದು ಸಾಮಾನ್ಯವಾದ ವಿಷಯ. ಈ ರೋಗಗಳಿಗೆಲ್ಲಾ ಮುಖ್ಯವಾದ ಕಾರಣ ಹಳ್ಳಿಗಳಲ್ಲಿರುವ ಹೊಲಸೇ ಎಂದು ಧಾರಾಳವಾಗಿ ಹೇಳಬಹುದು. ನಮ್ಮ ಜನಗಳು ಈ ರೋಗಗಳಿಂದ ನರಳುತ್ತಿದ್ದರೂ ಅಜ್ಞಾನದಿಂದ ಅವುಗಳ ಕಾರಣವನ್ನು ತಿಳಿಯದೆ ಇದೆಲ್ಲಾ ದೇವರ ಲೀಲೆಯೆಂದೂ, ತಮ್ಮ ಹಣೆಯ ಬರಹವೆಂದೂ ಮೂಢನಂಬಿಕೆಯನ್ನಿಟ್ಟುಕೊಂಡು ತೊಂದರೆಪಡುತ್ತಿರುತ್ತಾರೆ. ನಮ್ಮ ಹಳ್ಳಿಗಳನ್ನು ಅಭಿವೃದ್ಧಿಪಡಿಸಬೇಕಾದರೆ ಮೊದಲು ಜ್ಞಾನವು ಹರಡಬೇಕು. ಹಳ್ಳಿಗಳಲ್ಲಿ ಅಲ್ಲಲ್ಲಿ ನೀರು ನಿಂತು ಕೊಳಕಾಗದಂತೆ ಜಲ್ಲಿ ಚರಂಡಿಗಳನ್ನೋ ಅಥವಾ ನೀರು ಇಂಗುವ (Soak pits) ಗುಣಿಗಳನ್ನೋ ತಯಾರಿಸಬೇಕು. ಅಲ್ಲಲ್ಲೇ ನೀರು ನಿಲ್ಲುವ ಸ್ಥಳಗಳಲ್ಲಿ ಹೂವಿನ ಅಥವಾ ಹಣ್ಣಿನ ಗಿಡಗಳನ್ನು ಹಾಕುವುದರಿಂದ ಊರಿನ ಆರೋಗ್ಯವನ್ನೂ, ಸೊಬಗನ್ನೂ ಉತ್ತಮಪಡಿಸಬಹುದು. ಅಲ್ಲದೆ ಗೊಬ್ಬರವನ್ನು ಬಯಲಿನಲ್ಲಿ ಹಾಕುವುದನ್ನು ತಪ್ಪಿಸಿ ಹಿಂದೆ ತಿಳಿಸಿರುವಂತೆ ಗೊಬ್ಬರದ ಗುಂಡಿಗಳಲ್ಲಿ ಹಾಕಿ ಮಣ್ಣುಮುಚ್ಚುವಂತೆ ಜನಗಳಲ್ಲಿ ತಿಳಿವಳಿಕೆ ಹರಡಬೇಕು. ಊರಿನ ಬೀದಿಗಳಲ್ಲೆಲ್ಲಾ ಹೇಸಿಗೆ ಮಾಡುವುದನ್ನು ತಪ್ಪಿಸಿ ಕಕ್ಕಸದ ಉಪಯೋಗವನ್ನು ಜನಗಳಲ್ಲಿ ಪ್ರಚಾರಗೊಳಿಸಬೇಕು. ಜನಗಳನ್ನು ಕೋಟಲೆಗೊಳಿಸುತ್ತಿರುವ ಅನೇಕ ವ್ಯಾಧಿಗಳಿಗೆ ವೈಜ್ಞಾನಿಕರು ಕಂಡುಹಿಡಿದಿರುವ

'Inoculation' ಮತ್ತು 'Vaccination' ಮುಂತಾದ ಪ್ರತಿಬಂಧಕ ಕ್ರಮಗಳು ಜನಗಳಲ್ಲಿ ಪ್ರಚುರವಾಗಬೇಕು. ಮಲೇರಿಯಾ ನಿವಾರಣೆಗಾಗಿ ಹಳ್ಳಿಗಳಲ್ಲಿ 'Quinine' ಉಪಯೋಗವು ಹೆಚ್ಚಾಗುವಂತೆ ಮಾಡಬೇಕು. ಜನಗಳು ಆಹಾರದ ವಿಷಯದಲ್ಲಿ ಹೆಚ್ಚು ಗಮನಕೊಟ್ಟು ದೇಹ ಪೋಷಣೆಗೆ ಅವಶ್ಯಕವಾದ ಹಾಲು, ಮೊಸರು, ಸೊಪ್ಪು, ಮೊಟ್ಟೆ, ಮುಂತಾದುವುಗಳನ್ನು ಹೆಚ್ಚಾಗಿ ಉಪಯೋಗಿಸುವಂತೆ ಪ್ರಚಾರಕಾರ್ಯ ನಡೆಯಬೇಕು. ಇವುಗಳ ಜೊತೆಗೆ ವೈದ್ಯಸಹಾಯವು ಕೂಡ ಹಳ್ಳಿಯವರಿಗೆ ಒದಗುವಂತಾಗಬೇಕು. ಸರ್ಕಾರದವರು ಈ ವಿಷಯದಲ್ಲಿ ವಿಶೇಷ ಪ್ರಯತ್ನಗಳನ್ನು ನಡಸುತ್ತಿರುವರು. ನಮ್ಮ ಮೈಸೂರಿನಲ್ಲಿ ಸರ್ಕಾರದವರು ಅನೇಕ ಮಾದರಿ ಗ್ರಾಮಗಳನ್ನು ಆರಿಸಿ ಅಲ್ಲಿ ಗ್ರಾಮಾಭಿವೃದ್ಧಿಕಾರ್ಯಗಳನ್ನು ನಡೆಸುತ್ತಿರುವುದು ಎಲ್ಲರಿಗೂ ತಿಳಿದಿದೆ. ಜನಗಳ ಆರೋಗ್ಯಕ್ಕೆ ಮುಖ್ಯವಾದ ಉತ್ತಮವಾದ ನೀರು ದೊರೆಯುವಂತೆ ಗ್ರಾಮಾಂತರಗಳಲ್ಲಿ ಭಾವಿಗಳನ್ನು ತೆಗೆಯಿಸಲು ಐದು ವರ್ಷಗಳಲ್ಲಿ ಹದಿನೈದು ಲಕ್ಷ ರೂಪಾಯಿಗಳನ್ನು ಖರ್ಚುಮಾಡುವಂತೆ ತಯಾರಿಸಿರುವ ಯೋಜನೆಯು (Plan) ಉತ್ತಮವಾದುದೆಂದು ಬೇರೆ ಹೇಳಬೇಕಾಗಿಲ್ಲ. ಅಲ್ಲದೆ ದನಕರುಗಳ ಸ್ಥಿತಿಯನ್ನು ಉತ್ತಮಪಡಿಸಲು ವಿಶೇಷ ಪ್ರಯತ್ನಗಳನ್ನು ಕೈಕೊಂಡಿರುತ್ತಾರೆ. ಅವುಗಳಿಗೆ ಬರುವ ರೋಗಗಳನ್ನು ನಿವಾರಿಸಲು ಪಶುವೈದ್ಯ ಇಲಾಖೆಯಿಂದ ಆಧುನಿಕ ರೀತಿಯ ವೈದ್ಯ ಸಹಾಯವನ್ನು ಒದಗಿಸಲು ಏರ್ಪಡಿಸಿರುತ್ತಾರೆ. ದನಗಳಿಗೆ ಪ್ರಬಲ ಶತ್ರುವಾದ (Rinder pest) ದೊಡ್ಡರೋಗಕ್ಕೆ

(Goat Serum) ಎಂಬ ಹಾಲಿನ ಉಪಯೋಗದಿಂದ ಚಿಕಿತ್ಸೆ ಮಾಡುತ್ತಿರುವುದು ಪ್ರಶಂಸನೀಯವಾದುದು.

ಹಳ್ಳಿಗಳಲ್ಲಿ ಹಣ್ಣಿನ, ಹೂವಿನ ಮತ್ತು ತರಕಾರಿ ಗಿಡಗಳನ್ನು ಬೆಳೆಯಲು ಉತ್ತೇಜನಕೊಡುವುದಕ್ಕೆ ಮನೆಗಳ ಹಿತ್ತಲಲ್ಲಿ (Kitchen gardens) ಕೈದೋಟಗಳನ್ನು ಬೆಳೆಯಿಸ ಬೇಕೆಂದೂ, ಇದಕ್ಕಾಗಿ ತರ್ಕಾರಿ ಬೀಜಗಳನ್ನೂ, ಹಣ್ಣಿನ ಗಿಡಗಳನ್ನೂ ರಿಯಾಯಿತಿ ಬೆಲೆಗೆ ಕೊಡುವುದಕ್ಕೂ ಏರ್ಪಾಡು ಮಾಡಿರುತ್ತಾರೆ. ಅಲ್ಲದೆ ಗ್ರಾಮಾಂತರಗಳಲ್ಲಿ ವೈದ್ಯಸಹಾಯ ವನ್ನೊದಗಿಸುವುದಕ್ಕೂ ವಿಶೇಷ ಪ್ರಯತ್ನಗಳು ನಡೆದಿವೆ. ಅನೇಕ ಗ್ರಾಮಗಳಲ್ಲಿ 'Local fund' ಆಸ್ಪತ್ರೆಗಳೂ, ಇವುಗಳ ಜೊತೆಗೆ ಆಯುರ್ವೇದ ವೈದ್ಯಶಾಲೆಗಳನ್ನೂ ಏರ್ಪಡಿಸಿರುತ್ತಾರೆ. ಅಲ್ಲದೆ ಸುಶಿಕ್ಷಿತರಾದ ವೈದ್ಯರುಗಳು ಹಳ್ಳಿಗಳಲ್ಲಿ ನೆಲಸಿ ಜನಗಳಿಗೆ ವೈದ್ಯಸಹಾಯ ನೀಡುವಂತೆ ಏರ್ಪಾಡುಗಳನ್ನು ಮಾಡಿರುತ್ತಾರೆ. ಈಗ ಮೈಸೂರು ದೇಶ ದಲ್ಲಿ ಪ್ರತಿ ಇಪ್ಪತ್ತುಸಾವಿರ ಜನಕ್ಕೆ ಒಂದು ಆಸ್ಪತ್ರೆಯಂತೆ ಇದೆ ಎಂದೂ ಮತ್ತು ಇಂಡಿಯಾ ದೇಶದ ಇತರ ಎಲ್ಲಾ ಭಾಗಗಳಿಗಿಂತಲೂ ವೈದ್ಯಸಹಾಯದಲ್ಲಿ ನಮ್ಮ ದೇಶವು ಮುಂದುವರಿದಿದೆಯೆಂದೂ ಹೇಳಬಹುದು. ಅಲ್ಲದೆ ಇತ್ತೀಚೆಗೆ ನಮ್ಮ ಸಂಸ್ಥಾನದಲ್ಲಿ ಅನೇಕ ಉದಾರಿಗಳು ವೈದ್ಯ ಸಹಾಯಕ್ಕಾಗಿ ಧನಸಹಾಯ ಮಾಡುತ್ತಿರುವುದು ಹೆಮ್ಮೆಯ ವಿಷಯ. ಇದರ ಫಲವಾಗಿ ಅನೇಕ ಊರುಗಳಲ್ಲಿ ಹೆರಿಗೆ ಆಸ್ಪತ್ರೆಗಳೂ, ಶಿಶುಸಂರಕ್ಷಣಾ ಕೇಂದ್ರಗಳೂ, ಏರ್ಪಾಡಾಗಿ ಮಕ್ಕಳಿಗೂ ಮತ್ತು ತಾಯಂದಿರಿಗೂ ತುಂಬಾ ಸಹಾಯ ವಾಗಿದೆ. ಅಲ್ಲದೆ ಸಂಸ್ಥಾನದ ಎಲ್ಲಾ ಭಾಗಗಳಲ್ಲಿಯೂ

" ಬೇಬಿ ವೀಕ್ ''ಗಳನ್ನು ನಡೆಸಿ' ಉತ್ತಮವಾದ ಮಕ್ಕಳಿಗೆ ಬಹುಮಾನ ಹಂಚುತ್ತಿರುವುದು ಬಹಳ ಒಳ್ಳೆಯ ಪದ್ಧತಿ. 'Red Cross' ಸಂಸ್ಥೆಯವರು ಅನೇಕ ಪ್ರಬಲವಾದ ರೋಗಗಳ ನಿವಾರಣೆಗಾಗಿ ಅಮೋಘವಾದ ಸೇವೆ ಮಾಡುತ್ತಿರುವುದು ಎಲ್ಲರಿಗೂ ತಿಳಿದ ವಿಷಯ. ಅಲ್ಲದೆ ಹಳ್ಳಿಗಳ ಆರೋಗ್ಯವನ್ನು ಉತ್ತಮಗೊಳಿಸುವುದರಲ್ಲಿ ಒಂದು ವಿಶೇಷವಾದ ಪ್ರಯತ್ನ ವನ್ನು ಸರ್ಕಾರದವರು ಕೈಕೊಂಡಿರುತ್ತಾರೆ. ಕೆಲವು ಸ್ಥಳ ಗಳಲ್ಲಿ ಆರೋಗ್ಯ ಕೇಂದ್ರ (Health centres) ಸ್ಥಾಪಿಸಿ, ಹಳ್ಳಿ ಗಳಲ್ಲಿ ದೇವಿಹಾಕುವುದು, ಹೆರಿಗೆ ಕಾಲದಲ್ಲಿ ಸೂಲಗಿತ್ತಿಯರ ಸಹಾಯ ಒದಗಿಸುವುದು, ಭಾವಿಗಳನ್ನು ಶುಚಿಯಾ ಗಿಡುವುದು, ಆರೋಗ್ಯವಿಚಾರದಲ್ಲಿ ಸಲಹೆಗಳನ್ನು ಕೊಡು ವುದು, ಮುಂತಾದ ಕೆಲಸಗಳಿಂದ ಗ್ರಾಮಗಳ ಏಳಿಗೆಗೆ ವಿಶೇಷ ಸಹಾಯಮಾಡುತ್ತಿರುತ್ತಾರೆ. ಈ ಸಂದರ್ಭದಲ್ಲಿ ನಮ್ಮ ಹಳ್ಳಿಗಳಲ್ಲಿ ಇನ್ನೂ ವಿಶೇಷವಾದ ಕೆಲಸ ನಡೆಯ ಬೇಕಾಗಿರುತ್ತದೆ.

ಇದಕ್ಕೆ ಜನಗಳಲ್ಲಿ ಮೂಢ ನಂಬಿಕೆಯು ತೊಲಗಿ ತಿಳಿವಳಿಕೆಯು ಹೆಚ್ಚಾಗಿ ಅವರು ಸರ್ಕಾರದವರು ನಡೆಸು ತ್ತಿರುವ ಪ್ರಯತ್ನದಲ್ಲಿ ನೆರವಾಗುವಂತಾಗಬೇಕು. ಇದಕ್ಕೆ ಮುಖ್ಯವಾಗಿ ಹಳ್ಳಿಗಳಲ್ಲಿ ವಿದ್ಯಾಪ್ರಚಾರವಾಗಬೇಕು. ನಮ್ಮ ದೇಶದ ಹಳ್ಳಿಗಳಲ್ಲಿ ಶೇಕಡಾ 11 ರಷ್ಟು ಮಾತ್ರ ಓದುಬರಹ ಬಲ್ಲವರಾಗಿರುತ್ತಾರೆ. ಉಳಿದ ಜನರು ನಿರಕ್ಷರಕುಕ್ಷಿಗಳಾಗಿ ಅಜ್ಞಾನದ ಕತ್ತಲಲ್ಲಿ ಮುಳುಗಿರುತ್ತಾರೆ. ಜನಗಳಲ್ಲಿ ಜ್ಞಾನ ಪ್ರಚಾರಮಾಡಬೇಕೆಂಬ ಉದ್ದೇಶದಿಂದ ಸರ್ಕಾರದವರು ವಿಶೇಷ ಪ್ರಯತ್ನ ನಡೆಸುತ್ತಿದ್ದಾರೆ. ಆದರೂ ಅವುಗಳಿಂದ

ಹೆಚ್ಚು ಪ್ರಯೋಜನವಾಗಿಲ್ಲ. ಹಿಂದೆ ಗ್ರಾಮಗಳಲ್ಲಿ ತಿಳುವಳಿಕೆಯನ್ನು ಹರಡಲು ಅನೇಕ ಸಾಧನಗಳನ್ನು ಜನರು ಇಟ್ಟುಕೊಂಡಿದ್ದರು. ಹರಿಕಥೆ, ಪುರಾಣ, ಕೀರ್ತನೆಗಳು, ಲಾವಣಿಗಳು, ವಚನಗಳು ಮತ್ತು ಯಕ್ಷಗಾನ ಮುಂತಾದುವುಗಳು ಓದು ಬರಹ ಬಾರದ ಸಾಮಾನ್ಯ ಜನರಲ್ಲಿಯೂ ತಿಳುವಳಿಕೆಯನ್ನು ಹರಡುವ ಸಾಧನಗಳಾಗಿದ್ದುವು. ಅಲ್ಲದೆ ಗ್ರಾಮಾಂತರಗಳಲ್ಲಿ ಕೂಲಿಮಠಗಳೆಂಬ ಪಾಠಶಾಲೆಗಳಲ್ಲಿ ವ್ಯವಹಾರಕ್ಕೆ ಬೇಕಾದ ಲೆಖ್ಖ ಮತ್ತು ಮಕ್ಕಳಿಗೆ ಜ್ಞಾನಬೋಧಕವಾಗಿರುವ ಜೈಮಿನಿ ಭಾರತ, ಅಮರಕೋಶ ಮುಂತಾದ ಗ್ರಂಥಗಳ ಪರಿಚಯುವನ್ನು ಮಾಡಿಕೊಡುತ್ತಿದ್ದರು. ಈಗ ಆ ಸಾಧನೆಗಳೆಲ್ಲಾ ವಿಶೇಷವಾಗಿ ಕಡಿಮೆಯಾಗುತ್ತಿವೆ. ಆಧುನಿಕ ಕಾಲದಲ್ಲಿ ಜ್ಞಾನಪ್ರಚಾರ ಮಾಡಲು ಅನೇಕ ಸಾಧನೆಗಳಿವೆ. ರೇಡಿಯೋ, ಸಿನೀಮ, ಮ್ಯಾಜಿಕ್ ಲ್ಯಾಂಟರ್ನ್ (Magic Lantern) ಮುಂತಾದುವುಗಳ ಸಹಾಯದಿಂದ ಹೊಸ ವಿಷಯಗಳನ್ನು ತಿಳಿಸುವುದು ಸುಲಭ. ಆದರೆ ಹಳ್ಳಿಗಳಲ್ಲಿ ಇವು ಇನ್ನೂ ಪ್ರಚಾರಕ್ಕೆ ಬಂದಿಲ್ಲ.

ಜನಗಳಲ್ಲಿ ಅಕ್ಷರಾಭ್ಯಾಸವನ್ನು ಪ್ರಚುರಪಡಿಸಿ ವಿದ್ಯೆಯನ್ನು ಹರಡಲು ಸರ್ಕಾರದವರು ಪಾಠಶಾಲೆಗಳಿಗಾಗಿ ವಿಶೇಷ ಹಣವನ್ನು ಖರ್ಚುಮಾಡುತ್ತಿರುವರು. ಮೈಸೂರು ಸರ್ಕಾರದವರು 1865ರಲ್ಲಿ 1,13,000 ರೂಪಾಯಿಗಳನ್ನೂ, 1881ರಲ್ಲಿ 3,91,024 ರೂಪಾಯಿಗಳನ್ನೂ ಖರ್ಚುಮಾಡಿದರು. 1933ರಲ್ಲಿ 67,17,951 ರೂಪಾಯಿಗಳನ್ನು ವಿದ್ಯಾಭ್ಯಾಸಕ್ಕಾಗಿ ಖರ್ಚುಮಾಡಿದರು. ಇವರಿಂದ

ಈಚಿನ ವರ್ಷಗಳಲ್ಲಿ ಸರ್ಕಾರದವರು ವಿಶೇಷ ಹಣವನ್ನು ಈ ಬಾಬಿಗೆ ವ್ಯಯಮಾಡುತ್ತಿರುವರೆಂದು ಗೊತ್ತಾಗುವುದು. ಆದರೂ ಇದರಿಂದ ನಮ್ಮ ದೇಶದಲ್ಲಿ ವಿದ್ಯಾವಂತರ ಸಂಖ್ಯೆಯು ಹೆಚ್ಚಾಗಿಲ್ಲ. ಈಗಲೂ ನಮ್ಮ ದೇಶದಲ್ಲಿ ವಿದ್ಯಾವಂತರು ಶೇಕಡಾ 11 ಕ್ಕಿಂತ ಹೆಚ್ಚಾಗಿಲ್ಲ. ಇಂಗ್ಲೆಂಡ್ ದೇಶದಲ್ಲಿ ಶೇಕಡಾ 76, ಅಮೇರಿಕಾದ ಸಂಯುಕ್ತ ಸಂಸ್ಥಾನದಲ್ಲಿ (U.S.A.) ಶೇಕಡಾ 74, ಜಪಾನ್ ಶೇಕಡಾ 71 ವಿದ್ಯಾವಂತರಿರುವಾಗ, ನಮ್ಮ ದೇಶದಲ್ಲಿ ಅಜ್ಞಾನವು ಎಷ್ಟು ಹೆಚ್ಚಾಗಿರುವುದೆಂದು ಗೊತ್ತಾಗುವುದು. ಹಳ್ಳಿಗಳ ವಿದ್ಯಾಭ್ಯಾಸವೆಂದರೆ ಪ್ರಾಥಮಿಕ ವಿದ್ಯಾಭ್ಯಾಸ. ಈ ವಿದ್ಯಾಭ್ಯಾಸಕ್ಕೆ ತಗಲುವ ಹಣಕ್ಕೆ ಸರಿಯಾದ ಪ್ರತಿಫಲ ದೊರೆಯುತ್ತಿಲ್ಲ. ಇದಕ್ಕೆ ಕಾರಣಗಳು ಬಡತನ, ಸುಶಿಕ್ಷಿತ ರಲ್ಲದ ಬಹು ಕಡಿಮೆ ಸಂಬಳದ ಉಪಾಧ್ಯಾಯರು, ವಿದ್ಯಾಭ್ಯಾಸಕ್ರಮದಲ್ಲಿರುವ ನ್ಯೂನತೆ. ವಿದ್ಯಾಭ್ಯಾಸಕ್ರಮ ವನ್ನು ವಿಮರ್ಶಿಸಲು ಇಂಡಿಯಾ ಸರ್ಕಾರದಿಂದ ನೇಮಕವಾದ 'ಹಾರ್ಟಾಗ್' ಸಮಿತಿಯವರು ವಿದ್ಯಾರ್ಥಿಗಳು ಸ್ವಲ್ಪಮಟ್ಟಿ ಗಾದರೂ ವಿದ್ಯಾವಂತರಾಗಲು ಕನಿಷ್ಟಪಕ್ಷ ನಾಲ್ಕು ವರ್ಷ ಗಳಾದರೂ ಪಾಠಶಾಲೆಗೆ ತಪ್ಪದೆ ಹೋಗುವುದು ಆವಶ್ಯಕ ವೆಂದು ತಿಳಿಸಿರುತ್ತಾರೆ. 1922–1923 ರಲ್ಲಿ ಒಂದನೆಯ ತರಗತಿಗೆ ಸೇರಿದ 100 ಮಂದಿ ವಿದ್ಯಾರ್ಥಿಗಳಲ್ಲಿ 1925–26 ರಲ್ಲಿ ನಾಲ್ಕನೆಯ ತರಗತಿಗೆ ಸೇರಿದವರು 19 ಜನ ಮಾತ್ರ. 1926–1927 ರಲ್ಲಿ ಐದನೆಯ ತರಗತಿಗೆ ಸೇರಿದವರು 11 ಜನ ಮಾತ್ರ. ಅಂದರೆ ಶೇಕಡಾ 89 ಕ್ಕಿಂತ ಜಾಸ್ತಿಯಾಗಿ ಹುಡುಗರು ಮಧ್ಯದಲ್ಲಿಯೇ ಶಾಲೆಯನ್ನು ಬಿಟ್ಟುಬಿಡುವರು.

ಅಲ್ಲದೆ ಪಾಠಶಾಲೆಯನ್ನು ಬಿಟ್ಟಮೇಲೆ ಓದುವುದನ್ನಾದರೂ ರೂಢಿಯಲ್ಲಿಡಲು ತಕ್ಕ ಸಾಮುಗ್ರಿಗಳು ನಮ್ಮಲ್ಲಿಲ್ಲ. ಅನೇಕ ಗ್ರಾಮುಗಳಲ್ಲಿ ಒಂದು ವರ್ತಮಾನ ಪತ್ರಿಕೆಯು ಸಿಕ್ಕುವುದು ಕಷ್ಟ. ಅಲ್ಲದೆ ವಿದ್ಯಾಭ್ಯಾಸಕ್ರಮುವೂ ಕೂಡ ನಮ್ಮ ಹಳ್ಳಿಯ ಹುಡುಗರಿಗೆ ಅಷ್ಟು ಪ್ರಯೋಜನವಾಗುವುದಿಲ್ಲ. ಇದರಿಂದ ರೈತರನೇಕರು ತಮ್ಮ ಮುಕ್ಕಳನ್ನು ಪಾಠಶಾಲೆಗೆ ಕಳುಹಿಸದೆ ತಮ್ಮ ಬೇಸಾಯುದ ಕೆಲಸಕ್ಕೆ ಉಪಯೋಗಿಸಿಕೊಳ್ಳುವರು. ಇದರಿಂದ ಪಾಠಶಾಲೆಗಳಲ್ಲಿರುವ ರಿಜಿಸ್ಟರಿನ ಸಂಖ್ಯೆಯು ಹೆಚ್ಚಾಗಿದ್ದರೂ, ಹಾಜರಿ ಸಂಖ್ಯೆ ಬಹಳ ಕಡಿಮೆ. ಹಳ್ಳಿಗಳಲ್ಲಿ ನಿಜವಾಗಿಯೂ ಜ್ಞಾನಪ್ರಚಾರವಾಗಬೇಕಾದರೆ ವಿದ್ಯಾಭ್ಯಾಸ ಕ್ರಮುದಲ್ಲಿಯೇ ಮಾರ್ಪಾಟಾಗಬೇಕು. ಹಳ್ಳಿಗಳಸನ್ನಿವೇಶಕ್ಕೆ ಹೊಂದಿಕೊಂಡಿರುವ ಕಸಬುಗಳಲ್ಲಿ ಮುಕ್ಕಳಿಗೆ ತಿಳುವಳಿಕೆ ಯುಂಟಾಗುವಂತೆ ಏರ್ಪಡಿಸಬೇಕು. ಇದಕ್ಕೆ "ವಾರ್ಧಾ ಶಿಕ್ಷಣ ಪದ್ಧತಿ" ಎಂದು ಹೇಳುವರು. ಇದರ ಮುಖ್ಯ ತತ್ವ (Education through the craft) ಎಂದರೆ ಕೆಲಸದ ಮೂಲಕ ವಿದ್ಯಾಭ್ಯಾಸವೆಂದು. ವಾರ್ಧಾ ಶಿಕ್ಷಣ ಪದ್ಧತಿಯ ಸಾಧಕ ಬಾಧಕ ವಿಷಯುಗಳಲ್ಲಿ ವಿದ್ವಾಂಸರಲ್ಲಿ ಚರ್ಚೆ ಗಳಾಗುತ್ತಿವೆ. ಅಂತೂ ನಮ್ಮ ವಿದ್ಯಾಭ್ಯಾಸಕ್ರಮುದಲ್ಲಿ ಬದಲಾವಣೆ ಆಗಬೇಕೆನ್ನುವುದು ನಿರ್ವಿವಾದವಾದ ವಿಷಯ. ಅಲ್ಲದೆ ಹಳ್ಳಿಗಳಲ್ಲಿ ಜ್ಞಾನಪ್ರಚಾರಕ್ಕೆ ನೆರವಾಗುವ ವರ್ತಮಾನ ಪತ್ರಿಕೆಗಳನ್ನೂ ಮುತ್ತು ಸರ್ಕ್ಯುಲೇಟಿಂಗ್ ಲೈಬ್ರೆರಿ ಅಥವಾ ಪುಸ್ತಕಭಂಡಾರಗಳನ್ನೂ ಏರ್ಪಡಿಸಬೇಕು. ಅಲ್ಲದೆ ವಯಸ್ಸಾದವರಿಗೆ ಜ್ಞಾನಪ್ರಚಾರಮಾಡುವ "Adult Education" ಮುತ್ತು "Illiteracy Drive" ಅಂದರೆ

ಸಾಕ್ಷರತಾ ಪ್ರಚಾರವು ಬಹಳ ಬಿರುಸಾಗಿ ನಡೆಯಬೇಕು. ಇದರ ಜವಾಬ್ದಾರಿಯು ವಿದ್ಯಾವಂತರಾದ ಯುವಕರಮೇಲೆ ವಿಶೇಷವಾಗಿರುವುದು. ವಿದ್ಯಾವಂತರಾದ ಯುವಕರು ತಾವು ಸ್ಕೂಲು ಮತ್ತು ಕಾಲೇಜುಗಳಲ್ಲಿ ಕಲಿತ ವಿಷಯಗಳನ್ನು ಜನಗಳಲ್ಲಿ ಸುಲಭವಾದ ರೀತಿಯಲ್ಲಿ ಪ್ರಚುರಪಡಿಸಬೇಕು. ಅವರು ಶ್ರೀಯುತ ಸಿ. ರಾಜಗೋಪಾಲಾಚಾರ್ಯರು ಹೇಳಿದಂತೆ ಶ್ರದ್ಧಾಳುಗಳಾಗಿ ನಿಜವಾದ ಪ್ರೀತಿಯಿಂದ ಕೆಲಸಮಾಡಬೇಕು. ಕೇವಲ "ಚನ್ನಪಟ್ಟಣದ ಬಣ್ಣದ ಹಣ್ಣಿನಂತಿರಬಾರದು." ಹಳ್ಳಿ, ಹಳ್ಳಿಯ ಪಾಠಶಾಲೆ, ಹಳ್ಳಿಯ ಉಪಾಧ್ಯಾಯ—ಇವು ಮೂರು ನಮ್ಮ ಸಂಸ್ಕೃತಿಯ ಆಧಾರಸ್ತಂಭಗಳು. ಹಳ್ಳಿಯ ಉಪಾಧ್ಯಾಯರನ್ನು Brayne ಎಂಬ ವಿದ್ವಾಂಸರು "Village Dynamo"—ಶಕ್ತಿಯಂತ್ರ ಎಂದು ಹೇಳಿರುತ್ತಾರೆ. ಇದು ಸಹಜವಾದ ಮಾತು. ಉಪಾಧ್ಯಾಯರು ಮಕ್ಕಳಿಗೆ ಬರೀ ಪಾಠ ಮತ್ತು ಲೆಖ್ಖಗಳನ್ನು ಹೇಳುವುದರಲ್ಲಿ ತೃಪ್ತರಾಗದೆ ಮಕ್ಕಳನ್ನು ಉತ್ತಮ ರೀತಿಯ ಪ್ರಜೆಗಳಾಗುವಂತೆ ತಿಳುವಳಿಕೆ ಹೇಳಬೇಕು. ಹಳ್ಳಿಯ ಮಕ್ಕಳಿಗೆ ಹಳ್ಳಿಯ ಜೀವನದಲ್ಲಿ ಆಸಕ್ತಿ ಹುಟ್ಟಿಸಬೇಕು. ಹಳ್ಳಿಯ ಆಟಗಳು, ಗಾನ ಮುಂತಾದುವುಗಳಲ್ಲಿ ಮಕ್ಕಳಿಗೆ ಅಭಿರುಚಿ ಹೆಚ್ಚುವಂತೆ ಮಾಡಬೇಕು. ಹಳ್ಳಿಯ ಪಾಠಶಾಲೆ ಹಳ್ಳಿಗೆ ಆದರ್ಶವಾಗಿರಬೇಕು. ಆಧುನಿಕ ಕಾಲಕ್ಕೆ ಸರಿಹೊಂದುವಂತೆ ಮಕ್ಕಳಿಗೆ ಆರೋಗ್ಯಸಂಬಂಧವಾದ ವಿಷಯಗಳಲ್ಲಿ ತಿಳುವಳಿಕೆ ಹೇಳುವುದು, "First aid" (ಪ್ರಥಮ ಚಿಕಿತ್ಸೆ) ಮತ್ತು ಸ್ಕೌಟಿಂಗ್ ಮುಂತಾದ ವಿಷಯಗಳಲ್ಲಿ ತಿಳುವಳಿಕೆ ಮಾಡಬೇಕು. ಅಲ್ಲದೆ ಚಲನ ಚಿತ್ರಗಳು

ಮತ್ತು ಮಾಯಾದೀಪಗಳಿಂದ ಮಕ್ಕಳಿಗೂ ಹಳ್ಳಿಯವರಿಗೂ ಕಷ್ಟವಾದ ವಿಷಯಗಳನ್ನು ಸುಲಭವಾಗಿ ಬೋಧಿಸಬಹುದು.

ಅಲ್ಲದೆ ಹೆಣ್ಣುಮಕ್ಕಳ ವಿದ್ಯಾಭ್ಯಾಸದಲ್ಲಿ ನಮ್ಮ ಜನರು ಹೆಚ್ಚು ಶ್ರದ್ಧೆವಹಿಸಬೇಕು. ವಿದ್ಯಾವಂತಳಾದ ಪ್ರತಿಯೊಬ್ಬ ಹುಡುಗಿಯೂ ಭಾವಿಸಂತಾನದ ಅಭಿವೃದ್ಧಿಯಲ್ಲಿ ನೆರವಾಗುವ ಳೆಂಬುದನ್ನು ಮರೆಯಬಾರದು. ಮೇಲೆ ಹೇಳಿದ ಎಲ್ಲಾ ವಿದ್ಯಾಪ್ರಚಾರ ಕಾರ್ಯಗಳಲ್ಲಿ ಹೆಣ್ಣುಮಕ್ಕಳಿಗೆ ವಿಶೇಷವಾದ ಉತ್ತೇಜನ ಮತ್ತು ಅವಕಾಶಗಳಿರಬೇಕು. ಈ ಕೆಲಸಗಳಲ್ಲಿ ಹಳ್ಳಿಯ ಜನಗಳು ತಮ್ಮಲ್ಲಿರುವ ಉದಾಸೀನಭಾವವನ್ನು ಬಿಟ್ಟು ಹೆಚ್ಚಾಗಿ ಸಹಕರಿಸಬೇಕು.

ಇತ್ತೀಚೆಗೆ ಜನಗಳಲ್ಲಿ ಅನೇಕ ಕಾರಣಗಳಿಂದ ಉಂಟಾಗಿರುವ ಜಾಗ್ರತಿಯಿಂದ ನಮ್ಮ ದೇಶದಲ್ಲಿಯೂ ಜನಗಳು ಮುಂದರಿದ ದೇಶಗಳಲ್ಲಿರುವಂತೆ ಆಡಳಿತ ವಿಷಯದಲ್ಲಿ ಹೆಚ್ಚು ಭಾಗವಹಿಸಲು ಕಾತುರರಾಗಿರುವುದು ಸ್ವಾಭಾವಿಕವಾಗಿದೆ. ನಮ್ಮ ಸಂಸ್ಥಾನಗಳ ಪ್ರಜೆಗಳಲ್ಲಿ ಜವಾಬ್ದಾರಿ ಸರ್ಕಾರದ ಆಕಾಂಕ್ಷೆಯು ಪ್ರಬಲವಾಗುತ್ತಿರುವುದು ಸಹಜವಾದ ವಿಷಯ. ಕಾಲಪ್ರವಾಹವನ್ನು ಯಾರೂ ತಡೆಗಟ್ಟಲಾರರು. ನಿರಂಕುಶ ಅಧಿಕಾರದಿಂದ ಪ್ರಜೆಗಳ ಆಶಯಗಳನ್ನು ತಡೆಗಟ್ಟಲು ಪ್ರಯತ್ನಿಸುವುದು, ದೊಡ್ಡಪ್ರವಾಹವನ್ನು ಒಂದು ಮಗುವು ತನ್ನ ಪುಟ್ಟ ಕೈಗಳಿಂದ ತಡೆಯಲು ಪ್ರಯತ್ನಿಸುವಂತೆ ನಿಷ್ಫಲವಾದುದು ಎಂದು ಗಾಂಧೀಜಿಯವರು ಹೇಳಿರುವ ಮಾತು ಸತ್ಯವಾದುದು. ಆದರೆ ಜವಾಬ್ದಾರಿ ಸರ್ಕಾರವನ್ನು ನಿರ್ವಹಿಸಬೇಕಾದರೆ ಜನಗಳಲ್ಲಿ ಹೆಚ್ಚಿನ ಯೋಗ್ಯತೆ ಬೇಕು. ಪ್ರಜಾಪ್ರಭುತ್ವ ದೇಶಗಳಾದ ಇಂಗ್ಲೆಂಡ್, ಫ್ರಾನ್ಸ್

ಮತ್ತು ಅಮೇರಿಕಾ ಸಂಯುಕ್ತ ಸಂಸ್ಥಾನಗಳ ಜನರಲ್ಲಿ ವಿಶೇಷ ಜ್ಞಾನಪ್ರಚಾರವಾಗಿದೆ. ತಮ್ಮ ಪ್ರತಿನಿಧಿಗಳನ್ನು ಸರಿಯಾದ ರೀತಿಯಲ್ಲಿ ತಮ್ಮ ಛಂದಾಧಿಕಾರದಿಂದ(Voting) ಆರಿಸಿ ಆಡಳಿತ ನಿರ್ವಹಿಸಲು ಶಕ್ತರಾಗಿದ್ದಾರೆ. ಆ ತರಹ ಯೋಗ್ಯತೆಯು ನಮ್ಮ ಜನರಲ್ಲುಂಟಾಗಬೇಕಾದರೆ ಇನ್ನೂ ಬಹು ಕಾಲ ಬೇಕಾಗುವುದು. ಹಾಗೆಂದು ನಾವು ನಿರಾಶರಾಗ ಬೇಕಾದುದಿಲ್ಲ. ಈಗಾಗಲೇ ಅನೇಕ ಸಂಸ್ಥಾನಗಳಲ್ಲಿ ಜವಾಬ್ದಾರಿ ಸರ್ಕಾರದ ಕುರುಹುಗಳು ಕಂಡುಬರುತ್ತಿವೆ. ಪ್ರಜೆಗಳ ಅಭಿವೃದ್ಧಿಯಲ್ಲಿ ತುಂಬಾ ಆಸಕ್ತರಾಗಿರುವ ನಮ್ಮನ್ನಾಳುವ ಮಹಾಸ್ವಾಮಿಯವರು ಪ್ರಜೆಗಳ ಆಶಯ ಗಳನ್ನು ಪೂರ್ಣಗೊಳಿಸಲು ಮೈಸೂರಿನಲ್ಲಿ ರಾಜಕೀಯ ಸುಧಾರಣಾ ಸಮಿತಿಯನ್ನು ನೇಮಿಸಿರುವರು. ಇದರಿಂದ ಕಾಲಕ್ರಮದಲ್ಲಿ ಪ್ರಜೆಗಳಿಗೆ ಜವಾಬ್ದಾರಿ ಸರ್ಕಾರ ಬರ ಬಹುದು. ಇದಕ್ಕಾಗಿ ಪ್ರಜೆಗಳಿಗೆ ಆಡಳಿತವಿಷಯದಲ್ಲಿ ಹೆಚ್ಚು ಸಾಮರ್ಥ್ಯವುಂಟಾಗುವಂತೆ ಅವಕಾಶ ಕಲ್ಪಿಸಲು ಸರ್ಕಾರ ದವರು ಬಹು ವರ್ಷಗಳಿಂದ ಸ್ಥಳೀಯ ಸಂಸ್ಥೆಗಳ ಆಡಳಿತ ವನ್ನು ಪ್ರಜೆಗಳಿಗೆ ವಹಿಸಿಕೊಟ್ಟಿರುವರು. ಈ ಸ್ಥಳೀಯ ಸಂಸ್ಥೆಗಳ ಆಡಳಿತದಲ್ಲಿ ಮುಖ್ಯವಾದದ್ದು ಗ್ರಾಮ ಪಂಚಾಯಿತಿಗಳು. ಮೈಸೂರಿನಲ್ಲಿ 1914ರಲ್ಲಿ ಜಾರಿಗೆ ಬಂದ "Village Improvement Scheme" ಮತ್ತು ಇತರ ಕಾನೂನುಗಳನ್ನು ಕ್ರೋಢೀಕರಿಸಿ 1926ರಲ್ಲಿ "Village Panchayat Regulation" (ಗ್ರಾಮ ಪಂಚಾಯಿತಿಗಳ ಕಾನೂನನ್ನು) ಜಾರಿಗೆ ತಂದರು.

ಇದರಿಂದ ಹಳ್ಳಿಗಳಲ್ಲಿ ನಡೆಯಬೇಕಾಗಿರುವ ಗ್ರಾಮಾಭಿ

ವೃದ್ಧಿಕಾರ್ಯಗಳನ್ನು ಹಳ್ಳಿಯವರೇ ಮಾಡಿಕೊಳ್ಳಲನು ಕೂಲವಾಗುವಂತೆ ಗ್ರಾಮ ಪಂಚಾಯಿತಿಗಳನ್ನು ಜಾರಿಗೆ ತಂದರು. ಈ ಸಂದರ್ಭದಲ್ಲಿ ವಿಶ್ವವಿದ್ಯಾನಿಲಯದ ಮುಖ್ಯಾಧಿಕಾರಿಗಳಾಗಿದ್ದ ಸರ್ ಬ್ರಜೇಂದ್ರನಾಥ ಸೀಲ್ ರವರು ಹೇಳಿರುವ ಮಾತುಗಳು ಗಮನಾರ್ಹವಾದುವುಗಳು. ಅವರು "There can be no Constitutional Reform in Mysore without the Reform of the Ryots at the Plough" ಎಂದರೆ, "ನೇಗಿಲನ್ನು ಹಿಡಿಯುವ ರೈತರನ್ನು ಸುಧಾರಿಸುವವರೆಗೂ ಮೈಸೂರು ಸಂಸ್ಥಾನದಲ್ಲಿ ರಾಜಕೀಯ ಸುಧಾರಣೆಗಳು ಮುಂದರಿಯವು. ನೂರಾರು ಕಾನ್ ಫರೆನ್ಸು ಗಳಾಗಬಹುದು. ಆದರೂ ರೈತರು ಹಳ್ಳಿಯ ಆಡಳಿತವನ್ನು ಸಮರ್ಪಕವಾಗಿ ನಡೆಸಬಲ್ಲರೆಂದು ದೃಢವಾಗುವವರೆಗೂ ಪ್ರಜಾಸತ್ತಾತ್ಮಕ ಸರ್ಕಾರವು ಬರಲಾರದೆಂಬುದನ್ನು ದೃಢ ವಾಗಿ ತಿಳಿಯಲಿ"–ಈ ಪಂಚಾಯಿತಿಗಳನ್ನು ಪ್ರಜಾಸೇವೆಯ ದೇವಾಲಯಗಳೆಂದು ಧಾರಾಳವಾಗಿ ಹೇಳಬಹುದು. ಹೀಗಿದ್ದರೂ ನಮ್ಮ ದೇಶದಲ್ಲಿ ಗ್ರಾಮ ಪಂಚಾಯಿತಿಗಳು ಅಷ್ಟು ಸಮರ್ಪಕವಾಗಿ ನಡೆದಿಲ್ಲ. ಮೈಸೂರಿನಲ್ಲಿ ಈಗ ಸುಮಾರು 11,390 ಪಂಚಾಯಿತಿಗಳಿವೆ. ಇವುಗಳ ಒಟ್ಟು ಆದಾಯ ಸುಮಾರು 75 ಲಕ್ಷ ರೂಪಾಯಿಗಳು. ಇವುಗಳ ಸಹಾಯದಿಂದ ಅನೇಕ ಕಡೆಗಳಲ್ಲಿ ಗ್ರಾಮಾಭಿವೃದ್ಧಿ ಕೆಲಸಗಳು ನಡೆದಿವೆ. ಆದರೆ ಜನಗಳ ದೃಷ್ಟಿಯೆಲ್ಲಾ ಕೇಂದ್ರ ಸರ್ಕಾರದಮೇಲೆ ಬಿದ್ದು, ಎಲ್ಲಾ ಕೆಲಸವನ್ನೂ ಸರ್ಕಾರದವರೇ ಮಾಡಲಿ ಎನ್ನುವ ತಪ್ಪುಭಾವನೆಯು ನಮ್ಮ ಜನರಲ್ಲಿ ಮೂಡಿದೆ. ಇದರ ಜೊತೆಗೆ ವಿದ್ಯಾವಂತರಾದ ಜನರಿಗೆ ನಮ್ಮ ಹಳ್ಳಿಗಳ

ವಿಷಯದಲ್ಲಿ ಅನಾದರಣೆಯು ಹೆಚ್ಚಿ ಅವರು ಹಳ್ಳಿಗಳಿಂದ ಪಟ್ಟಣಗಳಿಗೆ ವಲಸೆಹೋಗುತ್ತಿರುವುದು (Migration) ನಮ್ಮ ಗ್ರಾಮಗಳ ಹೀನಸ್ಥಿತಿಗೆ ಪ್ರಬಲವಾದ ಕಾರಣವಾಗಿದೆ. ನಮ್ಮ ಜನಗಳಲ್ಲಿ ನಮ್ಮ ಊರು, ನಮ್ಮ ಗ್ರಾಮದ ಕೆಲಸ ಎಂಬ ಮಮತೆಯೇ ಮಾಯವಾಗಿ ಎಲ್ಲಾ ಕೆಲಸಗಳಿಗೂ ಸರ್ಕಾರದ ಕೈಕಾಯುತ್ತಿರುವ ನಿರ್ಬಲಸ್ಥಿತಿಯು ಬಂದೊದಗಿದೆ. ಅಲ್ಲದೆ ವಿದ್ಯಾವಂತರಾದ ಜನಗಳು ಹಳ್ಳಿಗಳನ್ನು ಬಿಡುವುದರಿಂದ ಹಳ್ಳಿಗಳಲ್ಲಿ ಯೋಗ್ಯರಾದ ನಾಯಕರಿಲ್ಲದೆ ವ್ಯಾಜ್ಯ ವ್ಯವಹಾರಗಳು ಹೆಚ್ಚಾಗಿ ಪಂಚಾಯಿತಿಗಳ ಕೆಲಸಕ್ಕೆ ತುಂಬಾ ಅಡಚಣೆಯಾಗಿದೆ. ಸ್ನೇಹ ಸೌಹಾರ್ದಗಳಿಗೆ ಬದಲಾಗಿ ದ್ವೇಷ ಅಸೂಯೆಗಳು ಮೂಡಿ, ಊರೊಟ್ಟಿನ ಕೆಲಸಗಳಲ್ಲಿ ಜನಗಳಿಗಿದ್ದ ಮಮತೆಯೇ ಹೋಗಿಬಿಟ್ಟಿದೆ. ನಮ್ಮ ಹಳ್ಳಿಯವರು ಹಿಂದೆ ಮಾಡುತ್ತಿದ್ದ ಸೋಮವಾರದ ಕೆಲಸವು ಕೇವಲ ನಾಮಾವಶೇಷವಾಗಿದೆ. ಇಂದು ನಿಜವಾಗಿಯೂ ದೇಶಾಭಿಮಾನಿಯಾಗಿ ರೈತರ ಮೇಲ್ಮೆಗೆ ದುಡಿಯಬೇಕೆಂದಿರುವ ಪ್ರತಿಯೊಬ್ಬ ಮನುಷ್ಯನೂ ಗ್ರಾಮಪಂಚಾಯಿತಿಗಳ ಕಡೆಗೆ ತನ್ನ ದೃಷ್ಟಿಯನ್ನು ತಿರುಗಿಸಿ, ಅವುಗಳನ್ನು ಉತ್ತಮಗೊಳಿಸಲು ತನ್ನ ಸರ್ವಶಕ್ತಿಯನ್ನೂ ಉಪಯೋಗಿಸಬೇಕು. ಸಮರ್ಪಕವಾಗಿ ಕೆಲಸಮಾಡುವ ಪಂಚಾಯಿತಿಯ ಸಹಾಯದಿಂದ ಅನೇಕ ಗ್ರಾಮಾಭಿವೃದ್ಧಿಕಾರ್ಯಗಳನ್ನು ಇತರರ ಸಹಾಯವಿಲ್ಲದೆ ಗ್ರಾಮಸ್ಥರೇ ಮಾಡಿಕೊಳ್ಳಬಹುದು. ಅವುಗಳಿಗೆ ಬೇಕಾಗುವ ಸಹಾಯಸಂಪತ್ತಿಗಳನ್ನು ಸರ್ಕಾರದವರು ಒದಗಿಸಲು ಸಿದ್ಧರಾಗಿರುವರು. ಆದರೆ ಎಲ್ಲಾ ಕೆಲಸವನ್ನೂ ಸರ್ಕಾರದವರೇ ಮಾಡಲಿ ಎಂಬ

ಭಾವನೆಯು ಅಸಾಧುವಾದುದು. ಯಾವ ಸರ್ಕಾರವೂ ಆ ತರಹ ಕೆಲಸವಮಾಡಲಾರದು. ಜವಾಬ್ದಾರಿ ಸರ್ಕಾರದಿಂದ (Responsible Government) ಸ್ವರ್ಣಯುಗವು ಪ್ರಾರಂಭ ವಾಗುವುದೆಂದೂ, ಪ್ರಪಂಚವೇ ಸ್ವರ್ಗವಾಗುವುದೆಂದೂ ಹೇಳುವ ಮಾತುಗಳು ಬರೀ ಅತಿಶಯೋಕ್ತಿಗಳು. ಪ್ರಜೆ ಗಳು ತಮ್ಮ ಜವಾಬ್ದಾರಿಯನ್ನು ಅರಿತ ಹೊರತು ಜವಾಬ್ದಾರಿ ಸರ್ಕಾರವನ್ನು ನಿರ್ವಹಿಸಲಾರರೆಂಬುದು ಎಲ್ಲರೂ ನೆನಪಿ ನಲ್ಲಿಡಬೇಕಾದ ಅಂಶ. ಮುಖ್ಯವಾಗಿ ಒಂದು ದೇಶವು ಏಳಿಗೆಗೆ ಬರಬೇಕಾದರೆ ಜನಗಳು ತಮ್ಮ ಅಭಿವೃದ್ಧಿಗೆ ತಾವೇ ದುಡಿಯಬೇಕು. ಆತ್ಮಾವಲಂಬಿಗಳಾಗಿ ತಮ್ಮ ಕೆಲಸ ಗಳನ್ನು ಇತರರ ಸಹಾಯವಿಲ್ಲದೇ ಮಾಡಿಕೊಳ್ಳುವವರಾಗ ಬೇಕು. ತಮ್ಮ ಏಳು ಬೀಳುಗಳು ತಮ್ಮ ಕೈಯಲ್ಲಿರು ವುವೆಂಬುದನ್ನು ಚೆನ್ನಾಗಿ ಅರಿತುಕೊಳ್ಳಬೇಕು. ಗ್ರಾಮಸ್ಥರ ಸಹಾಯ, ಪ್ರಯತ್ನಗಳಿಲ್ಲದೆ ಗ್ರಾಮಗಳು ಎಂದಿಗೂ ಏಳಿಗೆಗೆ ಬರಲಾರವು. "One can take the horse to wate, but twenty cannot make him drink" ಎಂಬಂ ಇತರರು, ಸರ್ಕಾರದವರು ಕೇವಲ ದಾರಿತೋರಿಸಬಲ್ಲರು (guide). ಕೆಲಸ ಮಾಡುವುದು ಜನಗಳ ಕರ್ತವ್ಯ ; ಈ ಭಾವ ಗಳನ್ನು ಜನರಲ್ಲಿ ಪ್ರಚಾರಮಾಡುವುದು ಪ್ರತಿಯೊಬ್ಬ ವಿದ್ಯಾ ವಂತನ ಕೆಲಸ. ಈ ತರಹ ತಿಳುವಳಿಕೆ ನಮ್ಮ ಜನಗಳಲ್ಲಿ ಹರಡಿ, ಗ್ರಾಮಗಳಲ್ಲಿ ಶಾಂತಿ ಸಮಾಧಾನಗಳೇರ್ಪಟ್ಟು, ಜನರು ಸೋಮಾರಿತನವನ್ನು ಬಿಟ್ಟು, ಕಷ್ಟಪಟ್ಟು ದುಡಿದು ಗ್ರಾಮಗಳ ಮೇಲ್ಮೆಗೆ ತನ್ಮೂಲಕ ದೇಶದ ಏಳಿಗೆಗೆ ಕೆಲಸ ಮಾಡುತ್ತಾರೆಂದು ಆಶಿಸೋಣ.

---

703—39.—ಬೆಂಗಳೂರು ಸಿಟಿ ಬೆಂಗಳೂರು ಪ್ರೆಸ್ಸಿನಲ್ಲಿ ಸೂಪರಿಂಟೆಂಡೆಂಟರಾ ಜಿ. ಶ್ರೀನಿವಾಸಯ್ಯರವರು ಮುದ್ರಿಸಿರುವರು